ಶ್ರೀ ವಾಗ್ದೇವೀ ಗ್ರಂಥಮಾಲೆ, ಧಾರವಾಡ

(ಪುಷ್ಪ ೮.)

# ಶ್ರೀ ಸ್ವಾಮಿ ರಾಮತೀರ್ಥರ ಚರಿತ್ರ

## (ರಾಮತೀರ್ಥಬೋಧಾಮೃತ ಸಹಿತ.)



ಇದನ್ನು

**ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ**

**ವಕೀಲ ಧಾರವಾಡ**

ಇವರು ರಚಿಸಿ

ತಮ್ಮ ಸ್ವಾಮಿತ್ವವುಳ್ಳ ಧಾರವಾಡ ಚಂದ್ರೋದಯ ಮುದ್ರಾಲಯದಲ್ಲಿ
ಮುದ್ರಿಸಿ ಅಲ್ಲಿಯೇ ಪ್ರಸಿದ್ಧ ಮಾಡಿದರು.

೧ ನೇ ಆವೃತ್ತಿ.



ಸನ್ನ ೧೯೩೧ ನೇ ಜಾನೆವಾರಿ.



**ಬೆಲೆ ೧೦ ಆಣೆ.**

**ಮುದ್ರಕರು**--ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ, ಧಾರವಾಡ

**ಮುದ್ರಣಾಲಯ**--ಚಂದ್ರೋದಯ ಮುದ್ರಣಾಲಯ, ಧಾರವಾಡ.

**ಪ್ರಕಾಶಕರು**--ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ, ಧಾರವಾಡ

**ಪ್ರಕಾಶನದ ಸ್ಥಳ**--ಚಂದ್ರೋದಯ ಮುದ್ರಣಾಲಯ, ಧಾರವಾಡ

**೧೯೩೧ ಜಾನೇವಾರಿ.**

# ಪ್ರಸ್ತಾವನೆ.

ಯಾವಾಗಲು ಸಾಧು ಸಜ್ಜನರ ದರ್ಶನವನ್ನು ತೆಗೆದುಕೊಳ್ಳುತ್ತಿರಬೇಕು. ಅವರು ನಮಗೆ ಉಪದೇಶವನ್ನು ಮಾಡದೆ ನಮ್ಮ ಕೂಡ ಸಾಧಾರಣ ತರದ ಮಾತುಗಳನ್ನು ಆಡಿದರೂ ಆ ಮಾತುಗಳು ಸಹ ಉಪದೇಶದಂತೆಯೇ ಪರಿಣಮಿಸುತ್ತವೆ. ಆದರೆ ಈ ಮಹಾತ್ಮರ ದರ್ಶನವಾಗುವದು ಯಾವಾಗಲು ಸುಲಭವಲ್ಲ. ಆದುದರಿಂದ ಅವರ ಚರಿತ್ರವನ್ನೂ, ಅವರು ಕೊಟ್ಟ ಉಪದೇಶವನ್ನೂ ಓದಿದರೆ ನಮ್ಮ ಚಿತ್ತ ಶುದ್ಧಿಯನ್ನು ಮಾಡಿಕೊಳ್ಳಲಿಕ್ಕೆ ಎಷ್ಟೋ ಅನುಕೂಲವಾಗುತ್ತದೆ. ಉತ್ತಮವಾದದ್ದು ಸಾಧ್ಯವಿಲ್ಲದಿದ್ದಾಗ ಮಧ್ಯಮವಾದದ್ದನ್ನು ಸಂಪಾದಿಸುವದು ಎಂದೂ ಅಯೋಗ್ಯವಾಗಲಾರದು. ಈ ದೃಷ್ಟಿಯಿಂದ ನಾವು ಕನ್ನಡ ವಾಚಕರ ಸಲುವಾಗಿ **ಶ್ರೀ ಸ್ವಾಮೀ ರಾಮತೀರ್ಥರ** ಚರಿತ್ರವನ್ನು ಅವರ ಬೋಧಾಮೃತ ಸಹಿತವಾಗಿ ಈಗ ರಚಿಸಿ ಪ್ರಸಿದ್ಧಮಾಡಿರುತ್ತೇವೆ. ಹಿಂಪಕ್ಕೆ ನಾವು **ಶ್ರೀ ರಾಮಕೃಷ್ಣ ಪರಮಹಂಸರ** ಸತ್ಕಥೆಗಳನ್ನು ಅವರ ಸಂಕ್ಷಿಪ್ತ ಜೀವನ ಚರಿತ್ರ ಸಹಿತವಾಗಿ ರಚಿಸಿ ಮುದ್ರಿಸಿರುತ್ತೇವೆ. ಹಾಗೂ ಶಿವಾಜಿ ಮಹಾರಾಜರ ಗುರುಗಳಾದ **ಶ್ರೀ ರಾಮದಾಸಸ್ವಾಮಿಗಳ** ಚರಿತ್ರವನ್ನು ರಚಿಸಿ ಪ್ರಸಿದ್ಧ ಮಾಡಿರುತ್ತೇವೆ. ಹಾಗೂ ಇನ್ನು ಮುಂದೆ ತೀವ್ರವಾಗಿಯೇ **ಶ್ರೀ ಸ್ವಾಮೀ ವಿವೇಕಾನಂದರ** ಚರಿತ್ರವನ್ನು ಅವರ ಬೋಧಾಮೃತ ಸಹಿತವಾಗಿ ಪ್ರಸಿದ್ಧ ಮಾಡುವವರಿದ್ದೇವೆ. ಅವುಗಳೆಲ್ಲವನ್ನು ನಮ್ಮ ಕನ್ನಡ ವಾಚಕರಾದ ಬಂಧುಭಗಿನಿಯರು ಓದಿ ತಮ್ಮ ಚಿತ್ತ ಶುದ್ಧಿಯನ್ನು ಮಾಡಿಕೊಳ್ಳಲಿಕ್ಕೆ ತಪ್ಪಲಾರರೆಂದು ನಾವು ತುಂಬಾ ನೆನೆಸುತ್ತೇವೆ.

ಸಜ್ಜನ ವಿಧೇಯ

**ಧಾರವಾಡ**
ತಾ. ೧-೧-೧೯೩೧

**ಗ. ಹು. ಹೊನ್ನಾಪುರಮಠ**
ಗ್ರಂಥಕರ್ತ.

# ವಿಷಯಾನುಕ್ರಮಣಿಕೆ.



# ಶ್ರೀ ಸ್ವಾಮಿ ರಾಮತೀರ್ಥರ ಚರಿತ್ರ.



## ಉಪೋದ್ಘಾತ.

ಪಾರಮಾರ್ಥಿಕ ದೃಷ್ಟಿಯಿಂದ ವಿಚಾರ ಮಾಡಿದರೆ ನಮ್ಮ ಭರತ ಖಂಡದ ಮೇಲೆ ಪರಮೇಶ್ವರನ ಕೃಪಾಕಟಾಕ್ಷವು ವಿಶೇಷವಿರುತ್ತದೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ. ಯಾಕಂದರೆ ನಮ್ಮ ದೇಶದಲ್ಲಿ ಮೊದಲಿನಿಂದಲೂ ದೊಡ್ಡ ದೊಡ್ಡ ಧರ್ಮಸ್ಥಾಪಕರು, ಮಹಾತ್ಮರು, ಸಾಧುಸತ್ಪುರುಷರು ಮತ್ತು ತತ್ವಜ್ಞಾನಿಗಳು ಆಗಿಹೋಗಿರುತ್ತಾರೆ. ಇಂಗ್ಲಂಡ, ಅಮೇರಿಕಾ, ಜಪಾನ ಮೊದಲಾದ ದೇಶಗಳು ರಾಜಕೀಯ ಕಾರಣದ ಸಲುವಾಗಿ ಅಥವಾ ಅವುಗಳ ಸಂಪತ್ತು ಕಲಾಕೌಶಲ್ಯಗಳ ಸಲುವಾಗಿ ಎಷ್ಟು ಉನ್ನತಿಗೆ ಬಂದಿದ್ದರೂ ಈಶ್ವರಭಕ್ತಿ, ವೈರಾಗ್ಯ ಇವುಗಳ ವಿಷಯದಲ್ಲಿ ನಮ್ಮ ದೇಶವೇ ಜಗತ್ತಿನೊಳಗಿನ ಇತರ ಯಾವತ್ತು ದೇಶಗಳಿಗಿಂತಲು ಶ್ರೇಷ್ಠವಾದದ್ದು ಇರುತ್ತದೆ. ಈಶ್ವರಭಕ್ತಿ ಮತ್ತು ವೈರಾಗ್ಯಗಳು ಜನ್ಮಸಾರ್ಥಕ್ಯವನ್ನು ಮಾಡಿಕೊಳ್ಳಲಿಕ್ಕೆ ಮುಖ್ಯವಾದ ಸಾಧನಗಳು. ಲಕ್ಷಾವಧಿ ಅಥವಾ ಕೋಟ್ಯಾವಧಿ ರುಪಾಯಿಗಳು ನಮ್ಮ ಹತ್ತರವಿದ್ದರೂ, ನಾವು ಎಷ್ಟು ವಿದ್ಯಾಕೋವಿದರು ಅಥವಾ ಕಲಾಕೋವಿದರು ಇದ್ದರೂ ನಮ್ಮಲ್ಲಿ ಈಶ್ವರಭಕ್ತಿ ಮತ್ತು ವೈರಾಗ್ಯಗಳು ಇಲ್ಲದಿದ್ದರೆ ನಮ್ಮ ಜನ್ಮವು ವ್ಯರ್ಥವೆಂತಲೇ ತಿಳಿಯತಕ್ಕದ್ದು. ಈ ದೃಷ್ಟಿಯಿಂದ ವಿಚಾರ ಮಾಡಿ ನಾವೆಲ್ಲರು ನಮ್ಮ ದೇಶದೊಳಗೆ ಆಗಿ ಹೋದ ಸಾಧುಸತ್ಪುರುಷರ ಮತ್ತು ಮಹಾತ್ಮರ ಜೀವನಚರಿತ್ರಗಳನ್ನೂ, ಅವರು ಮಾಡಿದ ಸ್ವಧರ್ಮದ ಮತ್ತು ಸ್ವದೇಶದ ಅಲೌಕಿಕ ಕಾರ್ಯಗಳನ್ನೂ, ಅವರು ತಮ್ಮ ಅಧಿಕಾರವಾಣಿಯಿಂದ ಹೇಳಿದ ಉಪದೇಶಾಮೃತವನ್ನೂ, ಧಾರ್ಮಿಕ ಬುದ್ಧಿ

ಯಿಂದ ಓದಿ ಅವುಗಳಿಂದ ಯೋಗ್ಯವಾದ ಬೋಧವನ್ನು ತೆಗೆದುಕೊಳ್ಳುವದು ನಮ್ಮ ಮುಖ್ಯ ಕರ್ತವ್ಯವಿರುತ್ತದೆ. ಅಂತೇ ನಾವು ಈಚೆಗೆ ೧೯ ನೇ ಶತಕದಲ್ಲಿ ಉತ್ತರ ಹಿಂದುಸ್ಥಾನದೊಳಗೆ ಆಗಿ ಹೋದ **ಶ್ರೀ ರಾಮಕೃಷ್ಣ ಪರಮ ಹಂಸ, ಶ್ರೀ ಸ್ವಾಮಿ ವಿವೇಕಾನಂದ** ಮತ್ತು **ಶ್ರೀ ಸ್ವಾಮಿ ರಾಮ ತೀರ್ಥ** ಈ ಮೂರು ಮಂದಿ ಜಗದ್ವಂದ್ಯ ಮಹಾತ್ಮರಲ್ಲಿ ಒಬ್ಬರಾದ ಶ್ರೀ ಸ್ವಾಮಿ ರಾಮತೀರ್ಥರ ಚರಿತ್ರವನ್ನು ಇಲ್ಲಿ ನಮ್ಮ ಕನ್ನಡ ವಾಚಕರ ಸಲುವಾಗಿ ಒರೆಯುಲು ಆರಂಭಿಸುತ್ತೇವೆ.

## ತೀರ್ಥರಾಮರ ಜನನ.

ನಮ್ಮ ಚರಿತ್ರನಾಯಕರು ಪಂಜಾಬದೊಳಗೆ ಗುಜರಾಣವಾಲಾ ಜಿಲ್ಹೆಯಲ್ಲಿ ಮುರಲೀವಾಲಾ ಎಂಬ ಸಣ್ಣ ಹಳ್ಳಿಯೊಳಗೆ ಸನ್ನ ೧೮೭೩ ನೇ ಇಸವಿಯ ಆಕ್ಟೋಬರ ೨೨ ನೇ ತಾರೀಖಿನ ಬುಧವಾರ ದಿವಸ ಹುಟ್ಟಿದರು. ಇವರ ತಂದೆಯ ಹೆಸರು ಹಿರಾನಂದ. ಅವನು ಪೇಶಾವರದಲ್ಲಿ ಮತ್ತು ಸ್ವಾತ ಎಂಬ ಊರಲ್ಲಿ ಉಪಾಧ್ಯವೃತ್ತಿಯಿಂದ ಜೀವನವನ್ನು ಮಾಡಿಕೊಂಡು ಬಹಳ ಬಡತನದಿಂದ ಇರುತ್ತಿದ್ದನು. ಆದರೆ ಅವನು ಹಿಂದೀ ರಾಮಾಯಣದ ಕರ್ತರೂ, ಶ್ರೀ ಪ್ರಭುರಾಮಚಂದ್ರನ ನಿಸ್ಸೀಮ ಭಕ್ತರೂ ಆದ ಶ್ರೀ ಗೋಸ್ವಾಮಿ ತುಲಸೀದಾಸರ ವಂಶಜನು ಇದ್ದನು. ಶ್ರೀ ಗೋಸ್ವಾಮಿ ತುಲಸೀದಾಸರು ಶ್ರೀ ವಾಲ್ಮೀಕಿ ಮಹರ್ಷಿಗಳ ಅವತಾರವೆಂದು ಪ್ರಸಿದ್ಧಿಯುಂಟು. ಶ್ರೀ ಪ್ರಭುರಾಮಚಂದ್ರನ ಮೇಲಿನ ಅವರ ಭಕ್ತಿಯು ಪ್ರತ್ಯಕ್ಷ ಅಂಜನೇಯನ ಭಕ್ತಿಗೆ ಸಮಾನವಾಗಿತ್ತೆಂದು ಅನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಒಂದು ಸಾರೆ ಅವರು ವೃಂದಾವನ ಕ್ಷೇತ್ರದಲ್ಲಿ ಶ್ರೀ ಕೃಷ್ಣನ ವಿಗ್ರಹದ ಮುಂದೆ ಕುಳಿತು ಅದನ್ನು ರಾಮಚಂದ್ರನ ಮೂರ್ತಿಯೆಂತಲೇ ತಮ್ಮ ಮನಸ್ಸಿನೊಳಗೆ ಪೂರ್ಣವಾಗಿ ಭಾವಿಸಿ ಆದರಂತೆ ಭಜನವನ್ನೂ, ಸ್ತುತಿ ಸ್ತೋತ್ರಗಳನ್ನೂ ಮಾಡುತ್ತ ಕೂಡ್ರಲಾಗಿ ಶ್ರೀ ಕೃಷ್ಣನ ವಿಗ್ರಹವು ಶ್ರೀ ರಾಮಚಂದ್ರನ ಮೂರ್ತಿಯಾದದ್ದನ್ನು ವೃಂದಾವನ ಕ್ಷೇತ್ರವಾಸಿಗಳು ಪ್ರತ್ಯಕ್ಷವಾಗಿ ಮನಗಂಡು ಅವರ ಭಕ್ತಿಯ ಬಗ್ಗೆ ಆಶ್ಚರ್ಯಚಕಿತರಾದರು. ಮತ್ತೊಂದುಸಾರೆ

ಈ ಗೋಸ್ವಾಮಿ ತುಲಸೀದಾಸರ ಭಕ್ತಿಗೆ ಮೆಚ್ಚಿ ಶ್ರೀ ರಾಮಲಕ್ಷ್ಮಣರು ಅವರಿಗೆ ಅವರ ಆಶ್ರಮದ ಸಮೀಪದಲ್ಲಿ ಪ್ರತ್ಯಕ್ಷ ದರ್ಶನವನ್ನು ಕೊಟ್ಟರು. ಇಂಥ ಪವಿತ್ರವಾದ ವಂಶದಲ್ಲಿ ಹುಟ್ಟಿದ ತೀರ್ಥರಾಮರಲ್ಲಿ ಅವರ ವಂಶಜರಾದ ಗೋಸ್ವಾಮಿ ತುಲಸೀದಾಸರಲ್ಲಿದ್ದಂಥ ಭಕ್ತಿಮಯ ಅಂತಃಕರಣವೂ, ಪರಮೇಶ್ವರನ ಪ್ರಾಪ್ತಿಯ ಉತ್ಕಂಠತೆಯೂ, ಪ್ರತಿಭಾಸಂಪನ್ನ ಕವಿತ್ವಶಕ್ತಿಯೂ ಮೂರ್ತಿಮಂತವಾಗಿದ್ದವೆಂದು ಹೇಳಿದರೆ ಏನೂ ಅತಿಶಯೋಕ್ತಿಯಾಗದು. ನಮ್ಮ ಚರಿತ್ರನಾಯಕರ ಜನ್ಮದ ಹೆಸರು ತೀರ್ಥರಾಮರೆಂದು ಇತ್ತು. ಆದರೆ ಅವರು ಸನ್ಯಾಸವೃತ್ತಿಯನ್ನು ಸ್ವೀಕರಿಸಿದ ಬಳಿಕ ಅವರಿಗೆ ರಾಮತೀರ್ಥರೆಂಬ ಹೆಸರು ಪ್ರಾಪ್ತವಾಯಿತು.

## ಬಾಲ್ಯ ಮತ್ತು ವಿದ್ಯಾಭ್ಯಾಸ.

ತೀರ್ಥರಾಮರ ಅಜ್ಜನು (ತಾಯಿಯ ತಂದೆಯು) ಜ್ಯೋತಿಷ್ಯ ಶಾಸ್ತ್ರದಲ್ಲಿ ಬಹಳ ಪ್ರವೀಣನಿದ್ದನು. ಅವನು ತಿರ್ಥರಾಮರು ಹುಟ್ಟಿದ ವರ್ತಮಾನವನ್ನು ಕೇಳಿದ ಕೂಡಲೆ ಅವರ ಜನ್ಮಪತ್ರಿಕೆಯನ್ನು ಬರೆಯಬೇಕೆಂದು ಅವರ ಕುಂಡಲಿಯನ್ನು ಹಾಕಿದ ಬಳಿಕ ಅವನ ಕಣ್ಣೊಳಗೆ ನೀರು ಬಂದವು. ಆದರೆ ಮುಂದೆ ಒಂದು ಕ್ಷಣದ ತರುವಾಯ ಅವನ ಮೋರೆಯ ಮೇಲಿನ ದುಃಖದ ಚಿನ್ಹವು ಹೊರಟುಹೋಗಿ, ಅವನು ಆನಂದದಿಂದ ನಗಹತ್ತಿದನು. ಈ ಪ್ರಕಾರ ಪರಸ್ಪರ ವಿರುದ್ಧವಾದ ಮನೋವಿಕಾರವಾಗಲಿಕ್ಕೆ ಕಾರಣವೇನೆಂದು ಅಲ್ಲಿ ಕುಳಿತಿದ್ದ ಜನರು ಅವನಿಗೆ ಪ್ರಶ್ನೆ ಮಾಡಿದರು. ಆಗ ಅವನು—“ನನ್ನ ಮೊಮ್ಮಗನು ಹುಟ್ಟಿದ ನಕ್ಷತ್ರವನ್ನು ನೋಡಲಾಗಿ ಅವನಾಗಲಿ, ಅವನ ತಾಯಿಯಾಗಲಿ ತೀವ್ರವಾಗಿ ಸಾಯುವ ಯೋಗವು ಇರುತ್ತದೆಂದು ನನಗೆ ದುಃಖವೆನಿಸಿ ನನ್ನ ಕಣ್ಣೊಳಗೆ ನೀರು ಬಂದವು. ಮತ್ತು ನನ್ನ ಮೊಮ್ಮಗನು ಒಂದು ವೇಳೆ ಬದುಕಿದರೆ ಅವನು ಮುಂದೆ ನಮ್ಮ ಕುಲೋದ್ಧಾರವನ್ನು ಮಾಡುವಂಥ ಜಗಪ್ರಸಿದ್ಧ ಮಹಾತ್ಮನು ಆಗುವನೆಂದು ತಿಳಿದು ನನಗೆ ಆನಂದವೆನಿಸಿ ನಗೆಯು ಬಂತು” ಎಂದು ಹೇಳಿದನು. ಈ ಪ್ರಕಾರ ಅವನು ಹೇಳಿದ ಭವಿಷ್ಯದ ಪ್ರಕಾರ ತೀರ್ಥರಾಮರ ತಾಯಿಯು ತೀರ್ಥರಾಮರನ್ನು

ಹಡೆದ ಒಂದು ತಿಂಗಳದೊಳಗಾಗಿಯೇ ತೀರಿಕೊಂಡಳು. ತಾಯಿಯು ಸತ್ತ ಅನಾಥ ಬಾಲಕನ ದುರ್ದಶೆಯನ್ನು ಏನೆಂದು ವರ್ಣಿಸಬೇಕು? ಜಗತ್ತಿನಲ್ಲಿ ತಾಯಿಯ ಪ್ರೇಮಕ್ಕೆ ಸರಿಯಾದದ್ದು ಯಾವದೂ ಇಲ್ಲ. **"ತಾಯಿಗಿಂತ ಬಂಧುವಿಲ್ಲ; ಉಪ್ಪಿಗಿಂತ ರುಚಿಯಿಲ್ಲ"** ಎಂಬ ನಾಣ್ಣುಡಿಯು ಪ್ರಸಿದ್ಧವಿರುತ್ತದೆ ಹೊತ್ತು ಹೊತ್ತಿಗೆ ಕೂಸಿನ ಹೊಟ್ಟೆನೆತ್ತಿಗಳನ್ನು ನೋಡುವವಳೂ, ಕೂಸನ್ನು ತೊಟ್ಟಿಲದಲ್ಲಿ ಮಲಗಿಸಿ ಜೋಗಳದ ಹಾಡುಗಳನ್ನು ಹಾಡುವವಳೂ, ತನ್ನ ಶಿಕ್ಷಣದಿಂದ ಕೂಸನ್ನು ಕೃಷ್ಣನಾಗಿ ಅಥವಾ ಕ್ರಿಸ್ತನಾಗಿ ಮಾಡುವ ಸಾಮರ್ಥ್ಯವುಳ್ಳವಳೂ ಆದ ತಾಯಿಯು ತೀರಿಕೊಂಡ ಮೇಲೆ ಕೂಸಿನ ಗತಿಯು ಏನಾಗಿದ್ದೀತೆಂದು ವಾಚಕರು ತಾವೇ ಕ್ಷಣ ಹೊತ್ತು ವಿಚಾರ ಮಾಡಲಿ! ತೀರ್ಥರಾಮರ ತಾಯಿಯು ತೀರಿಕೊಂಡದ್ದರಿಂದ ಅವರ ಪಾಲನ ಪೋಷಣವನ್ನು ಹೇಗೆ ಮಾಡಬೇಕೆಂದು ಬಡವನಾದ ಅವರ ತಂದೆಯು ಎದೆಗುಂದಿದನು. ಆದರೆ ಅವನ ತಮ್ಮನ ಹೆಂಡತಿಯು ತೀರ್ಥರಾಮರನ್ನು ಸಂರಕ್ಷಿಸುವ ಭಾರವನ್ನು ಕೈಕೊಂಡು ತನ್ನ ಆಹಾರ ನಿದ್ರೆಗಳ ಪರಿವೆಯಿಲ್ಲದೆ ಬಹು ಪ್ರೇಮದಿಂದಲೂ, ಶ್ರಮದಿಂದಲೂ ಆಕಳದ ಹೊಯ್ಯಿಹಾಲಿನಿಂದ ಅವರನ್ನು ಪೋಷಿಸಹತ್ತಿದಳು. ಅವಳು ಬಹಳ ಸದಾಚಾರಿಯೂ, ಈಶ್ವರ ಭಕ್ತಳೂ ಆಗಿದ್ದಳು. ತೀರ್ಥರಾಮರು ಅವಳು ಹೋದಲ್ಲೆಲ್ಲ ಅವಳ ಬೆನ್ನುಹತ್ತಿಯೇ ಹೋಗಹತ್ತಿದರು. ಅವಳು ದೇವರ ದರ್ಶನಕ್ಕೆ ಹೋಗಲಿ, ಅವಳು ಭಾರತ, ಭಾಗವತ, ರಾಮಾಯಣ ಇತ್ಯಾದಿ ಪುರಾಣಗಳನ್ನು ಕೇಳಲಿಕ್ಕೆ ಹೋಗಲಿ, ತೀರ್ಥರಾಮರು ಅವಳನ್ನು ಒಂದು ಕ್ಷಣ ಸಹ ಬಿಟ್ಟು ಇರುತ್ತಿದ್ದಿಲ್ಲ. ಆದುದರಿಂದ ತೀರ್ಥರಾಮರಲ್ಲಿ ಅವಳಲ್ಲಿದ್ದ ಧಾರ್ಮಿಕ ಬುದ್ಧಿ, ಔದಾರ್ಯ, ವಿವೇಕ, ಸಮಾಧಾನ ಮೊದಲಾದ ಸದ್ಗುಣಗಳು ಅಂಕುರವಾಗಿ ಅವರು ಯಾವಾಗಲೂ ಈಶ್ವರಭಜನವನ್ನೂ ಪುರಾಣ ಪುಣ್ಯಕಥಾಶ್ರವಣವನ್ನೂ ಮಾಡುವಲ್ಲಿ ಬಹಳ ಆಸಕ್ತರಾದರು. ಅವರಿಗೆ ಆಟನೋಟಗಳಲ್ಲಿ ಏನೂ ಮನಸ್ಸು ಇರುತ್ತಿದ್ದಿಲ್ಲ. ಅವರಿಗೆ ಯಾರಾದರೂ ತಿನ್ನಲಿಕ್ಕೆ ಕೊಡುತ್ತೇನೆಂದು ಕರೆದಾಗ್ಯೂ ಅವರು ತಮ್ಮ ಭಜನ ಮತ್ತು ಕಥಾಶ್ರವಣಗಳನ್ನು ಬಿಟ್ಟು ಎರಡನೇ ಕಡೆಗೆ ಉಲುಕು

ತ್ತಿದ್ದಿಲ್ಲ. ಅವರು ಅಳುತ್ತಿದ್ದಾಗ ಯಾರಾದರೂ ಶಂಖವನ್ನು ಊದಿದರೆ ಅಥವಾ 'ಓಂ' ಎಂಬ ವೇದಮಂತ್ರವನ್ನು ಉಚ್ಚರಿಸಿದರೆ ಅವರು ಕೂಡಲೇ ತಾವು ಅಳುವದನ್ನು ಬಿಟ್ಟು ಅದನ್ನು ಕೇಳುತ್ತ ಸುಮ್ಮನೆ ನಿಂತುಕೊಳ್ಳುತ್ತಿದ್ದರು.

ನಮ್ಮ ದೇಶದಲ್ಲಿ ಅನೇಕ ಕಡೆಗೆ ಇರುವ ಬಾಲವಿವಾಹದ ದುಷ್ಟ ಸಾಂಪ್ರದಾಯದ ಪ್ರಕಾರ ರಾಮತೀರ್ಥರು ಎರಡು ವರ್ಷ ಪ್ರಾಯದವರಿರುವಾಗಲೇ ಅವರ ವಿವಾಹದ ನಿಶ್ಚಯವು ಗುಜರಾಣವಾಲಾ ಜಿಲ್ಹೆಯೊಳಗೆ ವಝಿರಾಬಾದ ತಹಸೀಲ (ತಾಲೂಕ) ದಲ್ಲಿ ವಿರೋಕೀ ಎಂಬ ಹಳ್ಳಿಯಲ್ಲಿ ಇರುತ್ತಿದ್ದ ಪಂಡಿತ ರಾಮಚಂದ್ರ ಎಂಬವನ ಒಂದು ಸಣ್ಣ ಶಿಶುವಿನ ಕೂಡ ಆಗಿ ಆ ಪ್ರಾಂತದ ಸಾಂಪ್ರದಾಯದ ಪ್ರಕಾರ ಕೆಂಪು ಗಂಧದ ವಿಧಿಯು ಸಹ ನೆರವೇರಿತು. ಆದರೆ ಅವರ ಲಗ್ನವು ಮಾತ್ರ ಅವರು ಹತ್ತುವರ್ಷದವರಾದ ಬಳಿಕ ಆಯಿತು. ಆ ಕಾಲಕ್ಕೆ ಅವರಿಗೆ ಲಗ್ನದ ಸಂಬಂಧವಾಗಿ ಏನೂ ತಿಳಿಯುತ್ತಿದ್ದಿಲ್ಲ. ಆದುದರಿಂದ ಅವರು ತಮ್ಮ ತಂದೆಯು ಮಾಡಿದ್ದಕ್ಕೆ ನಿರುಪಾಯದಿಂದ ಸುಮ್ಮನಿದ್ದರು.

ತೀರ್ಥರಾಮರು ೫ ವರ್ಷ ಪ್ರಾಯದವರಿರುವಾಗಲೇ ಅವರ ತಂದೆಯು ಅವರಿಗೆ ವಿದ್ಯಾಭ್ಯಾಸ ಮಾಡುವ ಸಲುವಾಗಿ ತನ್ನ ಊರೊಳಗಿನ ಉರ್ದು ಪ್ರಾಥಮಿಕ ಶಾಲೆಗೆ ಕಳುಹಿಸಿದನು. ಆ ಶಾಲೆಯ ಮುಖ್ಯ ಅಧ್ಯಾಪಕನು ಮೌಲವೀ ಮಹಮ್ಮದೀನ ಎಂಬವನು ಇದ್ದನು. ತೀರ್ಥರಾಮರು ಮೊದಲಿನಿಂದಲೂ ಕುಶಾಗ್ರ ಬುದ್ಧಿಯವರೂ, ಒಳ್ಳೇ ಸ್ಮರಣಶಕ್ತಿಯುಳ್ಳವರೂ ಇದ್ದರು. ಆದುದರಿಂದ ಅವರ ಅಭ್ಯಾಸವು ಶಾಲೆಯೊಳಗಿನ ಇತರ ಯಾವತ್ತು ವಿದ್ಯಾರ್ಥಿಗಳಿಗಿಂತ ಬಹಳ ಚನ್ನಾಗಿ ಇರುತ್ತಿತ್ತು. ಅವರು ತಮ್ಮ ಶಾಲೆಯೊಳಗಿನ ಅಭ್ಯಾಸವನ್ನು ಸರಿಯಾಗಿ ಮಾಡುವದಲ್ಲದೆ 'ಗುಲಿಸ್ತಾನ' ಮತ್ತು 'ಬೋಸ್ತಾನ' ಎಂಬ ಎರಡು ಪಾರಶೀ ಭಾಷೆಯ ಗ್ರಂಥಗಳನ್ನು ಬಾಯಿಪಾಠ ಮಾಡಿದರು. ತೀರ್ಥರಾಮರು ಈ ಪ್ರಕಾರ ಶ್ರಮವಹಿಸಿ ತಮ್ಮ ಅಭ್ಯಾಸವನ್ನು ಮಾಡುತ್ತ ಎಲ್ಲ ವಿದ್ಯಾರ್ಥಿಗಳಿಗಿಂತ ಮಿಗಿಲಾಗಿದ್ದುದನ್ನು ನೋಡಿ ಅವರ ಶಾಲಾ ಗುರುಗಳಾದ ಮೌಲವೀ ಸಾಹೇಬರು ಅವ

ರನ್ನು ಬಹಳ ಪ್ರೀತಿಸಹತ್ತಿದರು. ಈ ಪ್ರಕಾರ ತೀರ್ಥರಾಮರು ಆ ಶಾಲೆಯಲ್ಲಿ ಕೆಲವು ದಿವಸ ಇದ್ದು ಅಲ್ಲಿಯ ಯಾವತ್ತು ಅಭ್ಯಾಸವನ್ನು ಪೂರ್ಣಮಾಡಿದರು. ಆಮೇಲೆ ಅವರು ಹೆಚ್ಚಿನ ವಿದ್ಯಾಭ್ಯಾಸವನ್ನು ಮಾಡುವದಕ್ಕಾಗಿ ಆ ಶಾಲೆಯನ್ನು ಬಿಟ್ಟು ಎರಡನೇ ಊರಿಗೆ ಹೋಗಬೇಕಾಯಿತು. ಆಗ ತೀರ್ಥರಾಮರ ವಿರಹದ ಸಲುವಾಗಿ ಆ ಶಾಲೆಯ ಗುರುಗಳಾದ ಮೌಲವೀಸಾಹೇಬರಿಗೆ ಬಹಳ ದುಃಖವಾಯಿತು. ಆದರೂ ಅವರು ತಮ್ಮ ಶಿಷ್ಯನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹೋಗುವದನ್ನು ನೋಡಿ ತಮ್ಮ ದುಃಖವನ್ನು ತಡೆದುಕೊಂಡು ತಮ್ಮ ಮನಸ್ಸಿಗೆ ಸಮಾಧಾನವನ್ನು ಮಾಡಿಕೊಂಡರು.

ತೀರ್ಥರಾಮರು ಹುಟ್ಟಿದಂದಿನಿಂದ ಬಹಳ ಅಶಕ್ತ ಪ್ರಕೃತಿಯವರಿದ್ದರು. ಸಾಧಾರಣತಃ ಬುದ್ಧಿಸಂಪನ್ನರಾದ ಬಡ ವಿದ್ಯಾರ್ಥಿಗಳು ಆಟಗಳಲ್ಲಿ ತಮ್ಮ ವೇಳೆಯನ್ನು ಕಳೆಯದೆ ಅಭ್ಯಾಸಮಾಡುವಲ್ಲಿಯೇ ಯಾವಾಗಲು ನಿಮಗ್ನರಾಗಿ ತಮ್ಮ ಪ್ರಕೃತಿಯನ್ನು ಅಲಕ್ಷಿಸುವ ಪ್ರಕಾರ ತೀರ್ಥರಾಮರಾದರೂ ತಮ್ಮ ಪ್ರಕೃತಿಯನ್ನು ಅಲಕ್ಷಿಸಿದ್ದರು. ಅವರಿಗೆ ಶಾಲೆಯ ಅಭ್ಯಾಸದ ಹೊರತಾಗಿ ಏನಾದರೂ ವೇಳೆಯು ಉಳಿಯಿತೆಂದರೆ ಅವರು ಯಾವಾಗಲು ದೇವರ ಗುಡಿಗಳಿಗೆ ಹೋಗಿ ಅಲ್ಲಿ ನಡೆದ ಪುರಾಣ ಪುಣ್ಯ ಕಥೆಗಳನ್ನು ಶ್ರವಣ ಮಾಡುತ್ತಿದ್ದರು. ಹಾಗೂ ತಾವು ಅವುಗಳನ್ನು ಕೇಳಿಕೊಂಡು ಬಂದ ಬಳಿಕ ತಮ್ಮ ಮನೆಯೊಳಗೆ ತಮ್ಮ ಆಪ್ತೇಷ್ಟರ ಮುಂದೆ ತಾವು ಕೇಳಿಕೊಂಡು ಬಂದದ್ದನ್ನೆಲ್ಲ ಒಂದೂ ಬಿಡದಂತೆ ಹೇಳುತ್ತಿದ್ದರು.

## ಭಕ್ತಧನ್ನಾರಾಮ.

ತೀರ್ಥರಾಮರ ಪ್ರಾಥಮಿಕ ಶಾಲೆಯ ಅಭ್ಯಾಸವು ಮುಗಿದ ಬಳಿಕ ಅವರ ತಂದೆಯು ಅವರನ್ನು ಮುರಲೀವಾಲಾದಿಂದ ಗುಜರಾಣವಾಲಾ ಎಂಬಲ್ಲಿಗೆ ಇಂಗ್ಲಿಷ ಕಲಿಯುವದಕ್ಕಾಗಿ ತಂದು ಅವರನ್ನು ತನ್ನ ಒಬ್ಬ ಸ್ನೇಹಿತನಾದ ಭಕ್ತಧನ್ನಾರಾಮನೆಂಬವನ ಮನೆಯಲ್ಲಿ ಇಟ್ಟನು. ಭಕ್ತಧನ್ನಾರಾಮನು ಬ್ರಾಹ್ಮಣೇತರ ಜಾತಿಯವನಿದ್ದು ಅವನು ಕಂಚುಗಾರ ಕೆಲಸವನ್ನು ಮಾಡುತ್ತಿದ್ದನು. ಅವನು ೪-೫ ವರ್ಷ ಮಾತ್ರ ಶಾಲೆಗೆ ಹೋಗಿ ಓದು

ವದು, ಬರೆಯುವದು ಮತ್ತು ಲೆಕ್ಕ ಮಾಡುವದು ಇವುಗಳನ್ನಷ್ಟೇ ಕಲಿತಿದ್ದನು. ಅವನು ತನಗೆ ಒಂದುಸಾರೆ ತನ್ನ ಶಾಲೆಯ ಮಾಸ್ತರನು ತನ್ನ ಸಂಗಡ ಹೊಟ್ಟೆ ಕಿಚ್ಚು ಮಾಡುವ ಹುಡುಗರ ಮಾತು ಕೇಳಿಕೊಂಡು ಅವರ ಕೈಯಿಂದ ತನ್ನ ಕಪಾಳಮೇಲೆ ಹೊಡಿಸಿದ ಕಾರಣ ಸಿಟ್ಟಿಗೆದ್ದು ಶಾಲೆಯನ್ನೇ ಬಿಟ್ಟುಕೊಟ್ಟನು. ಹಾಗೂ ಮುಂದೆ ಅವನು ಒಬ್ಬ ಅನುಭವಿಕ ಕಂಚುಗಾರನ ಬಳಿಯಲ್ಲಿ ನಿಂತುಕೊಂಡು ಹಿತ್ತಾಳಿ ತಾಮ್ರದ ಪಾತ್ರೆಗಳನ್ನು ಮಾಡಲಿಕ್ಕೆ ಕಲಿತು ಆ ಉದ್ಯೋಗದಲ್ಲಿ ಚನ್ನಾಗಿ ನಿಷ್ಣಾತನಾಗಿ ಅವನ ಹತ್ತಿರ ಕೆಲವು ದಿವಸ ಕೆಲಸ ಮಾಡಿದನು. ಅನಂತರ ಅವನು ದಾದನಖಾನ ಎಂಬ ಊರಲ್ಲಿ ಒಂದು ಸ್ವತಂತ್ರವಾದ ಅಂಗಡಿಯನ್ನಿಟ್ಟು ವ್ಯಾಪಾರ ಮಾಡಹತ್ತಿದನು. ಅವನಿಗೆ ಚಿಕ್ಕಂದಿನಿಂದ ವ್ಯಾಯಾಮವಮಾಡುವಲ್ಲಿಯೂ, ಕುಸ್ತಿಯಾಡುವಲ್ಲಿಯೂ ಬಹಳ ಪ್ರೇಮವಿತ್ತು. ಅವನು ಆ ಊರಲ್ಲಿ ತನ್ನ ಸ್ವಂತ ವೆಚ್ಚದಿಂದ ಒಂದು ವ್ಯಾಯಾಮ ಶಾಲೆಯನ್ನು ಸ್ಥಾಪಿಸಿ ತಾನು ನಿಯಮಿತತನದಿಂದ ಅಲ್ಲಿಗೆ ವ್ಯಾಯಾಮ ಮಾಡಲಿಕ್ಕೆ ಹೋಗುತ್ತಿದ್ದನು. ಹಾಗೂ ತನ್ನ ಸಂಗಡ ವ್ಯಾಯಾಮ ಮಾಡುವ ಬಗ್ಗೆ ಎರಡನೆಯುವರನ್ನು ಸಹ ಕರೆದುಕೊಂಡು ಹೋಗಿ ಅವರೆಲ್ಲರಲ್ಲಿ ವ್ಯಾಯಾಮದ ಬಗ್ಗೆ ಪ್ರೇಮವನ್ನು ಉತ್ಪನ್ನ ಮಾಡುತ್ತಿದ್ದನು. ಇದರಿಂದ ಆ ಊರೊಳಗೆ ಅನೇಕ ವ್ಯಾಯಾಮ ಶಾಲೆಗಳು ಸ್ಥಾಪನವಾಗಿ ಆ ಊರಿಗೆ ವ್ಯಾಯಾಮ ಶಾಲೆಗಳ ಊರು ಎಂಬ ಹೆಸರು ಬಿದ್ದಿತ್ತು. ಈ ಪ್ರಕಾರ ಧನ್ನಾರಾಮನು ವ್ಯಾಯಾಮಶಾಲೆಯಲ್ಲಿ ವ್ಯಾಯಾಮವನ್ನು ಮಾಡಿ ತನ್ನ ಶರೀರ ಸಾಮರ್ಥ್ಯವನ್ನು ಚನ್ನಾಗಿ ಇಟ್ಟುಕೊಂಡಂತೆಯೇ ತನ್ನ ಮನಸ್ಸನ್ನಾದರೂ ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡಿದ್ದನು. ಅವನು ತನ್ನ ಮನಸ್ಸಿನಲ್ಲಿ ಏನಾದರೊಂದು ಕೆಲಸ ಮಾಡುವದನ್ನು ಒಮ್ಮೆ ನಿಶ್ಚಯಿಸಿದನೆಂದರೆ ಅದನ್ನು ಮಾಡದೆ ಎಂದಿಗೂ ಬಿಡುತ್ತಿದ್ದಿಲ್ಲ. ಅವನ ಲಕ್ಷ್ಯವು ಇಂದ್ರಿಯದಮನದ ಕಡೆಗೆ ಮತ್ತು ಮನೋನಿಗ್ರಹದ ಕಡೆಗೆ ಬಹಳವಿತ್ತು. ಅವನು ಮಲಮೂತ್ರ ವಿಸರ್ಜನವನ್ನು ಸಹ ತನ್ನ ಇಚ್ಛೆಯ ಪ್ರಕಾರ ನಿರೋಧ ಮಾಡುತ್ತಿದ್ದನು. ಅವನು ಊಟಕ್ಕೆ ಕೂತಾಗ ನೀರು ಕುಡಿಯತಕ್ಕದ್ದಲ್ಲವೆಂದು ತನ್ನ ಮನಸ್ಸಿನಲ್ಲಿ ಒಮ್ಮೆ ನಿಶ್ಚಯಮಾಡಿ ಅದೇ

ಪ್ರಕಾರ ಕಡೆತನಕ ನಡೆಸಿದನು. ಅವನು ಒಮ್ಮೊಮ್ಮೆ ಇಡೀ ದಿವಸ ತನ್ನಷ್ಟಕ್ಕೆ ನಗುತ್ತಿದ್ದನು ಒಮ್ಮೊಮ್ಮೆ ಅವನು ಇಡೀ ದಿವಸ ಯಾರ ಕೂಡವೂ ಮಾತಾಡದೆ ಸುಮ್ಮನೆ ಕೂತು ಬಿಡುತ್ತಿದ್ದನು. ಕೆಲವು ದಿವಸ ಅವನು ಪಂಜಾಬದ ಚಳಿಯಲ್ಲಿ ಸಹ ತನ್ನ ಮೈಯೊಳಗೆ ಏನೂ ಅರಿವೆಯನ್ನು ಹಾಕುತ್ತಿದ್ದಿಲ್ಲ. ಕೆಲವು ದಿವಸ ಅವನು ಬಿಸಿಲು ದಿವಸಗಳಲ್ಲಿ ಸಹ ಉಣ್ಣೆಯ ಅರಿವೆಗಳನ್ನು ಹಾಕುತ್ತಿದ್ದನು. ಈ ರೀತಿಯಿಂದ ಅವನು ಯಾವಾಗಲು ತನ್ನ ಮನೋನಿಗ್ರಹವನ್ನು ಮಾಡುತ್ತಿದ್ದನು. ಅವನು ಮನಸ್ಸು ಸಹ ಬಹಳ ಉದಾರವಿತ್ತು. ಅವನು ತನಗೆ ಬಂದ ಉತ್ಪನ್ನದೊಳಗಿನ ಕೆಲವು ಭಾಗವನ್ನು ಸ್ವಂತ ಚರಿತಾರ್ಥದ ಸಲುವಾಗಿ ತೆಗೆದಿಟ್ಟು ಕೆಲವು ಭಾಗವನ್ನು ಸಾಧು ಸತ್ಪುರುಷರಿಗೆ ಕೊಡುತ್ತಿದ್ದನು. ಅವನ ಲಕ್ಷ್ಯವು ಚಿಕ್ಕಂದಿನಿಂದ ಪುರಾಣ ಪುಣ್ಯ ಕಥೆಗಳನ್ನು ಕೇಳುವದರ ಕಡೆಗೆ ಬಹಳವಿತ್ತು. ಅವನು ಅವುಗಳನ್ನು ಸ್ವತಃ ಏಕಾಗ್ರತೆಯಿಂದ ಕೇಳಿಕೊಳ್ಳುವದಲ್ಲದೆ ಎರಡನೆಯವರಿಗೆ ಹಾಗೆ ಮಾಡಲಿಕ್ಕೆ ಉಪದೇಶಮಾಡುತ್ತಿದ್ದನು. ಅವನು ಪುರಾಣ ಪುಣ್ಯ ಕಥೆಗಳನ್ನು ಕೇಳುತ್ತ ಕುಳಿತಾಗ ಯಾರಾದರೂ ಗದ್ದಲ ಮಾಡಿದರೆ ಅದು ಅವನಿಗೆ ಸೇರುತ್ತಿದ್ದಿಲ್ಲ. ಪರಮೇಶ್ವರನ ಭಕ್ತರ ಕಥೆಗಳನ್ನು ಕೇಳುವಾಗ ಅವನ ಅಂತಃಕರಣವು ಭಕ್ತಿ ರಸದಿಂದ ತುಂಬಿಹೋಗುತ್ತಿತ್ತು. ಅವನು ಒಂದು ಸಾರೆ ಸುದಾಮಾಖ್ಯಾನವನ್ನು ಕೇಳುವಾಗ್ಗೆ ಅವನ ಕಣ್ಣುಗಳಿಂದ ಪ್ರೇಮಾಶ್ರುಗಳು ಉದುರಿದವು. ಈ ಪ್ರಕಾರ ಅವನಲ್ಲಿ ಭಗವತ್ಪ್ರೇಮವು ಹೆಚ್ಚಾದಾಗ್ಗೆ ಅದು ಅವನ ಬಾಯಿಂದ ಕಾವ್ಯರೂಪದಿಂದ ಹೊರಬೀಳುತ್ತಿತ್ತು. ಆ ಕಾವ್ಯಗಳು ಛಂದೋಬದ್ಧವಾಗಿ ಇರದಿದ್ದರೂ ಅವುಗಳು ಸಹಜಸ್ಫೂರ್ತಿಯಿಂದ ಹೊರಬೀಳುತ್ತಿದ್ದ ಕಾರಣ ಅವುಗಳಲ್ಲಿ ಯಾವಾಗಲು ಸರಳತನವೂ ಪ್ರೇಮವೂ ತುಂಬಿರುತ್ತಿದ್ದವು. ಅವುಗಳಲ್ಲಿ ಕೃತ್ರಿಮತನದ ಲವಲೇಶವು ಸಹ ಇರುತ್ತಿದ್ದಿಲ್ಲ. ಭಕ್ತಧನ್ನಾರಾಮನಿಗೆ **ಯೋಗವಾಸಿಷ್ಠ**ವನ್ನು ಕೇಳುವಲ್ಲಿ ವಿಶೇಷ ಪ್ರೀತಿಯಿತ್ತು. ಅವನು ಯೋಗವಾಸಿಷ್ಠವನ್ನು ಕೇಳುವಾಗ್ಗೆ '**ಮನುಷ್ಯನು ಸ್ವಯಂಬ್ರಹ್ಮರೂಪನು ಇರುತ್ತಾನೆ**' ಎಂಬ ನಿರೂಪಣವನ್ನು ಒಮ್ಮೆ ಕೇಳಿದನು. ಆಗಿನಿಂದ ಅವನು ವಿಚಾರ ಮಾಡುತ್ತ ಮಾ

ಡುತ್ತ ಕಂಡಕಂಡವರಿಗೆಲ್ಲ '**ಹೇ ಬ್ರಹ್ಮನ್, ಹೇ ನಾರಾಯಣ**' ಎಂದು ಕರೆಯುತ್ತಿದ್ದನು. ಈ ಅವನ ವೃತ್ತಿಯ ಸಲುವಾಗಿ ಎಲ್ಲ ಜನರು ಅವನಿಗೆ '**ಖುದಾ**' (ಪರಮೇಶ್ವರ) ಎಂದು ಅನ್ನಹತ್ತಿದರು. ಈ ಪ್ರಕಾರ ಅವನ ಮಾನಸಿಕ ಉನ್ನತಿಯು ಆದಾಗ್ಯೂ ಅವನ ಮನಸ್ಸಿಗೆ ಶಾಂತಿಯು ಇದ್ದಿಲ್ಲ. '**ಸದ್ಗುರುವಿನ ಹೊರತಾಗಿ ನಿತ್ಯ ತೃಪ್ತಿಯಾಗಲಿಕ್ಕೆ ಇತರ ಸಾಧನ ವಿಲ್ಲ**' ಎಂದು ಅವನ ಮನಸ್ಸಿನ ಮೇಲೆ ಚನ್ನಾಗಿ ಬಿಂಬಿಸಿತ್ತು. ಆದಕಾರಣ ಅವನಿಗೆ ಸದ್ಗುರುವಿನ ನಿದಿಧ್ಯಾಸವು ಹತ್ತಿಹೋಗಿತ್ತು.

ಭಕ್ತಧನ್ನಾರಾಮನ ಮನಸ್ಸು ಈ ಪ್ರಕಾರ ಸದ್ಗುರುವಿನ ದರ್ಶನ ಕ್ಕೋಸ್ಕರ ವ್ಯಾಕುಲವಾಗಿರಲು ಅವನು ಪಿಂಡದಾದನಖಾನ ಎಂಬ ಊರ ನ್ನು ಬಿಟ್ಟು ಗುಜರಾವಾಳಾ ಎಂಬ ಊರಿಗೆ ಬಂದು ನಿಂತುಕೊಂಡನು. ಅಲ್ಲಿ ಅವನಿಗೆ ಒಬ್ಬ ಮಹಾತ್ಮನ ದರ್ಶನವಾಯಿತು. ಅವನಿಗೆ ಧನ್ನಾರಾಮನು ಶರಣು ಹೋಗಲಾಗಿ ಅವನು ಧನ್ನಾರಾಮನ ಮಸ್ತಕದ ಮೇಲೆ ತನ್ನ ವರದ ಹಸ್ತವನ್ನು ಇಟ್ಟು-"**ಆತ್ಮಕೇಂದ್ರದಲ್ಲಿ ಸ್ಥಿರವಾಗಿ ಇರುವ ಪ್ರಯ ತ್ನವನ್ನು ಮಾಡು. ಅಂದರೆ ನಿನ್ನ ಮನಸ್ಸು ಸ್ಥಿರವಾಗಿ ಇರು ವದು**" ಎಂದು ಉಪದೇಶ ಮಾಡಿದನು. ಆ ಪ್ರಕಾರ ಧನ್ನಾರಾಮನು ಆಸನವನ್ನು ಹಾಕಿಕೊಂಡು ಕುಳಿತು ಧ್ಯಾನಮಗ್ನನಾಗಲು ಅವನ ವೃತ್ತಿಯು ಸ್ವರೂಪಾಕಾರವಾಯಿತು. ಈ ಸ್ಥಿತಿಯಲ್ಲಿ ಧನ್ನಾರಾಮನು ನಾಲ್ಕು ತಾಸು ಗಳವರೆಗೆ ಇದ್ದನು. ಆಮೇಲೆ ಅವನು ಎಚ್ಚರಾಗಿ ನೋಡಲು ಆ ಮಹಾ ತ್ಮನು ಅಲ್ಲಿ ಇದ್ದಿಲ್ಲ. ಇದರಿಂದ ಅವನಿಗೆ ಪರಮಾವಧಿ ವ್ಯಸನವಾಯಿತು. ಆದರೂ ಅವನು ಆ ಮಹಾತ್ಮನ ಮೇಲೆ ವಿಶ್ವಾಸವಿಟ್ಟು ಮುಂದೆ ಕೆಲವು ದಿವಸ ಧ್ಯಾನಸ್ಥನಾಗಿ ಕೂಡ್ರುತ್ತಿರಲಾಗಿ ಆ ಮಹಾತ್ಮನು ಪುನಃ ಅವನಿಗೆ ದರ್ಶನ ಕೊಟ್ಟು ಅವನನ್ನು ಅರಣ್ಯದೊಳಗೆ ಕರೆದುಕೊಂಡು ಹೋದನು. ಅಲ್ಲಿ ಧನ್ನಾರಾಮನು ಇದೇ ಅಭ್ಯಾಸವನ್ನು ಹೆಚ್ಚಿಗೆ ಬೆಳೆಸಿದನು. ಅದರಿಂದ ಅವನ ವೃತ್ತಿಯು ಬದಲಾಗಿ ಅವನಿಗೆ ಬಹಿರ್ಮುಖವು ಏನೂ ಕಾಣಿಸದಂತೆ ಆಯಿತು. ಹಾಗೂ ಅವನ ಮನಸ್ಸು ಶಾಂತವೂ ಸ್ಥಿರವೂ ಆಯಿತು. ಮುಂದೆ ಅದೇ ಮಹಾತ್ಮನ ಅನುಗ್ರಹದಿಂದ ಧನ್ನಾರಾಮನಿಗೆ '**ವಾಚಿಕ ಮತ್ತು**

**ಮಾನಸಿಕ ಸಿದ್ಧಿಯು'** ಪ್ರಾಪ್ತವಾಯಿತು. ಆ ಯಾವತ್ತು ಸಿದ್ಧಿಯನ್ನು ಅವನು ತನ್ನ ಲಾಭದ ಸಲುವಾಗಿ ಅಥವಾ ಕೀರ್ತಿಯ ಸಲುವಾಗಿ ಎಂದೂ ಉಪಯೋಗಮಾಡಲಿಲ್ಲ. ಇದರಿಂದ ಭಕ್ತಧನ್ನಾರಾಮನ ಭಕ್ತಿ ವೈರಾಗ್ಯಗಳ ಕೀರ್ತಿಯು ನಾಲ್ಕೂ ಕಡೆಗೆ ಹಬ್ಬಿತು.

ಈ ಸಮಯಕ್ಕೆ ತೀರ್ಥರಾಮರ ತಂದೆಯಾದ ಹಿರಾನಂದನು ತನ್ನದೂ ಭಕ್ತಧನ್ನಾರಾಮನದೂ ಬಹಳ ಸ್ನೇಹವಿದ್ದುದರಿಂದ ಅವರನ್ನು ಅವನ ಮೇಲ್ವಿಚಾರಣೆಯಲ್ಲಿ ತಂದು ಇಟ್ಟನು. ಆಗಿನಿಂದ ಧನ್ನಾರಾಮನು ತೀರ್ಥರಾಮರ ಭಾವೀ ಉತ್ಕರ್ಷದ ಬೀಜವನ್ನು ಬಿತ್ತಲಿಕ್ಕೂ, ಅವರ **ಪೂರ್ವ** ಸಂಸ್ಕಾರವನ್ನು ಉದಯಗೊಳಿಸಲಿಕ್ಕೂ ಆರಂಭ ಮಾಡಿದನೆಂದರೆ ಏನೂ ತಪ್ಪಾಗದು. ತಿರ್ಥರಾಮರು ಭಕ್ತಧನ್ನಾರಾಮನ ಹತ್ತರ ಇರಲಿಕ್ಕೆ ಬಂದ ಹೊತ್ತಿನಲ್ಲಿ ಭಕ್ತಧನ್ನಾರಾಮನು ನಿತ್ಯ ಸಾಂಪ್ರದಾಯದಂತೆ **ಯೋಗವಾಸಿಷ್ಠ**ವನ್ನು ಓದಲಿಕ್ಕೂ ಅದರ ಮೇಲೆ ಪ್ರವಚನವನ್ನು ಮಾಡಲಿಕ್ಕೂ ಆರಂಭಮಾಡಿದ್ದನು. ಈ ಮಹನೀಯನು ವೇದಾಂತದಂಥ ಕಠಿಣ ವಿಷಯವನ್ನು ತನ್ನ ರಸಭರಿತವಾಣಿಯಿಂದಲೂ ತನ್ನ ಪ್ರೇಮಪೂರ್ಣವಾದ ಅಂತಃಕರಣದಿಂದಲೂ ಹೇಳುತ್ತಿದ್ದ ಕಾರಣ ಅವನ ಶ್ರೋತೃಗಳು ಅವನ ಪ್ರವಚನವನ್ನು ಕೇಳಿ ತಲ್ಲೀನರಾಗುತ್ತಿದ್ದರು. ಅವನಲ್ಲಿ ಇರಲಿಕ್ಕೆ ಬಂದಿದ್ದ ತೀರ್ಥರಾಮರು ಸಹ ಅವನ ಪ್ರವಚನವನ್ನು ಕೇಳಲಿಕ್ಕೆ ಬಹಳ ಆನಂದದಿಂದ ಬಂದು ಕೂಡ್ರುತ್ತಿದ್ದರು. ಹಾಗೂ ತಮ್ಮ ಅಭ್ಯಾಸದ ಹೊರತು ಇತರ ಯಾವತ್ತು ವೇಳೆಯನ್ನು ಅವನ ಸಹವಾಸದಲ್ಲಿಯೇ ಕಳೆಯುತ್ತಿದ್ದರು. ತೀರ್ಥರಾಮರು ಧನ್ನಾರಾಮನ ಸಾನ್ನಿಧ್ಯ ಮತ್ತು ಉಪದೇಶಗಳನ್ನೂ, ವಾಚಾಸಿದ್ಧಿಯನ್ನೂ ಕಂಡು ಅವನಿಗೆ ಸಾಕ್ಷಾತ್ ಪರಮೇಶ್ವರನೇ ಎಂದು ತಿಳಿಯುತ್ತಿದ್ದರು. ಹಾಗೂ ಯಾವಾಗಲು ಭಕ್ತಿಪುರಸ್ಸರವಾಗಿ ಅವನ ಸೇವೆಯನ್ನು ಮಾಡಹತ್ತಿದರು. ಹಾಗೂ ಈ ಮಹನೀಯನ ಅಪ್ಪಣೆಯ ಹೊರತಾಗಿ ತೀರ್ಥರಾಮರು ಒಂದು ಹೆಜ್ಜೆಯನ್ನು ಸಹ ಇಡುತ್ತಿದ್ದಿಲ್ಲ. ತೀರ್ಥರಾಮರು ಧನ್ನಾಜಿಯ ಮೇಲೆ ವಿಶೇಷ ಪ್ರೇಮಮಾಡುತ್ತಿದ್ದಂತೆ ಧನ್ನಾಜಿಯು ಸಹ ತೀರ್ಥರಾಮರ ಮೇಲೆ ವಿಶೇಷ ಪ್ರೇಮಮಾಡಹತ್ತಿದನು. ತೀರ್ಥರಾಮರು ತಮ್ಮ ಶ್ರದ್ಧೆ, ಭಕ್ತಿ

ಮತ್ತು ಸೇವೆ ಇವುಗಳಿಂದ ಧನ್ನಾಜಿಯು ಅಂತಃಕರಣವನ್ನು ಪೂರ್ಣವಾಗಿ ಎಳೆದುಕೊಂಡು ಬಿಟ್ಟರು. ಇದರಿಂದ ಧನ್ನಾಜಿಯು ಬಳಿಯಲ್ಲಿ ತೀರ್ಥರಾಮರು ಇರದಿದ್ದರೆ ಅವನಿಗೆ ಏನೂ ಸಮಾಧಾನವಾಗುತ್ತಿದ್ದಿಲ್ಲ. ಧನ್ನಾಜಿಯು ಬ್ರಾಹ್ಮಣೇತರನು ಮತ್ತು ಕಂಚುಗಾರ ಕೆಲಸ ಮಾಡುವವನು ಇದ್ದಾಗ್ಯೂ ದೊಡ್ಡ ಸತ್ಪುರುಷನೆಂದು ಅವನನ್ನು ತೀರ್ಥರಾಮರು ಕಡೆತನಕ ಎಣಿಸುತ್ತಿದ್ದರೆಂಬ ಸಂಗತಿಯನ್ನು ಯಾರೂ ಮರೆಯಕೂಡದು. ತೀರ್ಥರಾಮರು ತಾವು ದೊಡ್ಡವರು ಮತ್ತು ವಿದ್ವಾನರು ಆದಾಗ್ಯೂ ಧನ್ನಾಜಿಯ ಬಗ್ಗೆ ಅವರ ಆದರ ಬುದ್ಧಿಯು ಕಿಂಚಿತ್ತಾದರೂ ಕಡಿಮೆಯಾಗಲಿಲ್ಲ. ತೀರ್ಥರಾಮರು ಗೃಹಸ್ಥಾಶ್ರಮದಲ್ಲಿದ್ದಾಗ್ಗೆ ಧನ್ನಾಜಿಗೆ 'ಭಗವನ್' ಎಂದು ಸಂಬೋಧಿಸುತ್ತಿದ್ದರು. ಮುಂದೆ ಅವರು ಸನ್ಯಾಸಾಶ್ರಮವನ್ನು ತೆಗೆದುಕೊಂಡು ಸ್ವಾಮಿಗಳಾದ ನಂತರ ಅಂದರೆ ಪೂರ್ಣ ಅದ್ವೈತಿಯಾದ ನಂತರ ಸಹ ಅವನ ಬಗ್ಗೆ ಅವರ ಪೂಜ್ಯ ಬುದ್ಧಿಯು ಮೊದಲಿನಂತೆಯೇ ಇತ್ತು. ಸ್ವಾಮಿ ರಾಮತೀರ್ಥರು ತಾವು ಎಲ್ಲಿದ್ದಾಗ್ಯೂ ಧನ್ನಾಜಿಗೆ ಬಹುಶಃ ಎರಡು ಅಥವಾ ಮೂರು ದಿವಸಕ್ಕೊಮ್ಮೆ ತಪ್ಪದೆ ಪತ್ರವನ್ನು ಬರೆಯುತ್ತಿದ್ದರು. ಸ್ವಾಮಿಗಳು ತಾವು ಸಮಾಧಿಯನ್ನು ತೆಗೆದುಕೊಳ್ಳುವ ಎರಡು ತಿಂಗಳುಗಳ ಮುಂಚೆ ಅವನಿಗೆ ತಮ್ಮ ಕೊನೆಯ ಪತ್ರವನ್ನು ಬರೆದಿರುತ್ತಾರೆ. ಇದರಿಂದ ಈ ಭಗತಜಿ (ಭಕ್ತಶಿರೋಮಣಿ) ಯ ಬಗ್ಗೆ ಸ್ವಾಮಿ ರಾಮತೀರ್ಥರ ಆದರವು ಎಷ್ಟಿತ್ತೆಂಬುದು ತಾನೇ ಒಡೆದು ಕಾಣುತ್ತದೆ.

ಈ ಭಗತಜಿಯು ಈಗ ೮೦ ವರ್ಷದವನಿದ್ದಾನೆ. ಅವನ ಪ್ರಕೃತಿಯು ಇನ್ನೂ ಸುದೃಢವಿರುತ್ತದೆ. ಅವನು ತನ್ನ ಕೆಲಸವನ್ನು ತಾನೇ ಮಾಡುತ್ತಾನೆ. ಅವನು ನಿಷ್ಠಾವಂತ ಬ್ರಹ್ಮಚಾರಿಯಿರುವದರಿಂದ ಅವನ ಹತ್ತರ ಸ್ವಂತ ಪರಿವಾರವೇನೂ ಇರುವದಿಲ್ಲ. ಆದರೂ ಅವನು ತನ್ನ ಆಪ್ತೇಷ್ಟರ ಮಕ್ಕಳನ್ನು ಅವರ ವಿದ್ಯಾರ್ಜನೆಗೆ ಸಹಾಯ ಮಾಡುವ ಸಲುವಾಗಿ ತನ್ನ ಹತ್ತರ ಇಟ್ಟುಕೊಂಡಿರುತ್ತಾನೆ. ಅವನ ಭಕ್ತಸಮೂಹವಾದರೂ ವಿಶೇಷವಿರುತ್ತಿದ್ದು ಅದು ಅವನ ಸೇವೆಯನ್ನು ಮಾಡುತ್ತದೆ. ಅವನು ಸದ್ಯಕ್ಕೆ ಗುಜರಾಣವಾಲಾ ಎಂಬಲ್ಲಿ ಹಳೇ ಮಂಡಿಯೊಳಗೆ ಇರುತ್ತಾನೆ.

# ಇಂಗ್ರೇಜಿ ಶಿಕ್ಷಣದ ಆರಂಭವು.

ತೀರ್ಥರಾಮರು ಮುರಲೀವಾಲಾದಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣ ವನ್ನು ಮುಗಿಸಿ ಇಂಗ್ರೇಜಿಯನ್ನು ಕಲಿಯುಲಿಕ್ಕೆ ಗುಜರಾಣವಾಲಾಕ್ಕೆ ಬಂದ ರು. ಆಗ ಅವರು ಹತ್ತುವರ್ಷದ ಪ್ರಾಯದವರಿದ್ದು ಅಲ್ಲಿಗೆ ಬಂದನಂತರ ಅವರು ಮೊದಲಿಗೆ ಮಿಡಲ್‌ಸ್ಕೂಲಿಗೆ ಹೋಗಹತ್ತಿ ಎರಡು ಅಥವಾ ಎರ ಡೂವರಿ ವರ್ಷಗಳಲ್ಲಿ ಮಿಡಲ್‌ಸ್ಕೂಲದ ಅಭ್ಯಾಸವನ್ನು ಮುಗಿಸಿದರು. ಆ ನಂತರ ಅವರು ಹಾಯುಸ್ಕೂಲಿಗೆ ಹೋಗಹತ್ತಿ ಸನ್ನ ೧೮೮೮ ನೇ ಇಸ್ವಿಯಲ್ಲಿ ಅಂದರೆ ತಮ್ಮ ೧೫ ನೇ ವರ್ಷದ ಪ್ರಾಯದಲ್ಲಿ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆ ಯಲ್ಲಿ ಉತ್ತೀರ್ಣರಾದರು. ತೀರ್ಥರಾಮರು ಈ ಪರೀಕ್ಷೆಯೊಳಗೆ ಉತ್ತೀರ್ಣ ರಾದಾಗ ತಮ್ಮ ಶಾಲೆಯ ವಿದ್ಯಾರ್ಥಿಗಳೊಳಗೆ ಮೊದಲನೇ ನಂಬರವನ್ನು ಹಾಗೂ ತಮ್ಮ ಯುನಿವ್ಹರ್ಸಿಟಿಯೊಳಗೆ ಮೂವತ್ತರೊಂಬತ್ತನೇ ನಂಬರವನ್ನು ಪಡೆದರು. ಇದಕ್ಕಾಗಿ ಅವರಿಗೆ ಅಲ್ಲಿಯ ಮುನಸಿಪಾಲಟಿಯುವರು ಒಂದು ಸಣ್ಣ ಮಾಸಿಕ ಶಿಷ್ಯವೃತ್ತಿಯನ್ನು (ವಿದ್ಯಾರ್ಥಿವೇತನವನ್ನು) ಕೊಟ್ಟರು. ಇದರಿಂದ ಅವರಿಗೆ ಕಾಲೇಜಿನ ಉಚ್ಚತರದ ಶಿಕ್ಷಣವನ್ನು ಪಡೆಯಲಿಕ್ಕೆ ಪ್ರೋ ತ್ಸಾಹನವು ದೊರಕಿತು. ಆದರೆ ಅವರು ಮನೆಯಿಂದ ತೀರ ಬಡವರಿದ್ದರು. ಮುನಸಿಪಾಲಟಿಯುವರು ಅವರಿಗೆ ಕೊಟ್ಟ ಮಾಸಿಕ ಶಿಷ್ಯವೃತ್ತಿಯು ಬಹಳ ಸಣ್ಣದಿತ್ತು. ಅಷ್ಟರಿಂದ ಕಾಲೇಜದ ವೆಚ್ಚವು ಸಾಗುವಂತೆ ಇದ್ದಿಲ್ಲ. ಹಾಗೂ ತೀರ್ಥರಾಮರ ಲಗ್ನವು ಮೊದಲೇ ಆಗಿತ್ತು. ಆದುದರಿಂದ ಅವರ ತಂದೆಯಾದ ಹಿರಾನಂದನ ಮನಸ್ಸಿನಲ್ಲಿ ಅವರನ್ನು ಕಾಲೇಜಿಗೆ ಉಚ್ಚ ತರಗತಿಯ ಶಿಕ್ಷಣದ ಅಭ್ಯಾಸ ಮಾಡಲಿಕ್ಕೆ ಕಳಿಸದೆ ಯಾವದೊಂದು ಹೊಟ್ಟೆಯ ಉದ್ಯೋಗಕ್ಕೆ ಹಚ್ಚಬೇಕೆಂದು ಇತ್ತು. ಇದರಂತೆ ಅವನು ತೀರ್ಥರಾಮರಿಗೆ ತಿಳಿಸಿದನು. ಅದನ್ನು ತೀರ್ಥರಾಮರು ಕೇಳದೆ ತಮ್ಮ ತಂದೆಯ ಅಪೇಕ್ಷೆಯ ವಿರುದ್ಧವಾಗಿ ಕಾಲೇಜದ ಅಭ್ಯಾಸವನ್ನು ಮಾಡುವದಕ್ಕಾಗಿ ಲಾಹೋರಕ್ಕೆ ಹೊರಟು ಬಂದರು. ಹೀಗೆ ಮಾಡುವದಕ್ಕೆ ಅವರ ಸೋದರಮಾವನಾದ ರಘುನಾಥ ಮಲ್ಲನು ಮತ್ತು ಧನ್ನಾಜಿಯು ಅವರಿಗೆ ಪ್ರೋತ್ಸಾಹನ ಕೊಟ್ಟರು.

# ಕಾಲೇಜ ಶಿಕ್ಷಣ.

ತೀರ್ಥರಾಮರು ಲಾಹೋರಿಗೆ ಬಂದಬಳಿಕ ಫೋರಮನ್ ಕ್ರಿಶ್ಚನ್ ಕಾಲೇಜಕ್ಕೆ ಹೋಗಲಿಕ್ಕೆ ಹತ್ತಿದರು. ಅಲ್ಲಿ ಅವರು ಎರಡು ವರ್ಷಗಳ ಪರಿಯಂತರ ಬಹಳ ಶ್ರಮವನ್ನು ವಹಿಸಿ ಅಭ್ಯಾಸ ಮಾಡಿದರು. ಆ ಅವಧಿಯಲ್ಲಿ ಅವರು ತಮ್ಮ ವೆಚ್ಚವನ್ನು ಸಾಗಿಸುವದಕ್ಕಾಗಿ ಒಬ್ಬಿಬ್ಬ ಶ್ರೀಮಂತ ಹುಡುಗರಿಗೆ ಕಲಿಸುವದಕ್ಕೆ ಹೋಗುತ್ತಿದ್ದರು. ಇದಲ್ಲದೆ ಇನ್ನೊಂದು ಆಶ್ಚರ್ಯದ ಸಂಗತಿಯೇನಂದರೆ--ಅವರು ಎಫ್. ಎ. ಪರೀಕ್ಷೆಯಲ್ಲಿ ತಮ್ಮ ಎರಡನೇ ವಿಷಯವನ್ನು ಪಾರಶಿ ಭಾಷೆಯ ಬದಲಾಗಿ ಸಂಸ್ಕೃತವನ್ನು ತೆಗೆದುಕೊಂಡಿದ್ದರು. ಅವರಿಗೆ ಮೊದಲಿಗೆ ಸಂಸ್ಕೃತವು ಏನೂ ಬರುತ್ತಿದ್ದಿಲ್ಲ. ಆದರೆ ಅವರ ಒಬ್ಬ ಸಹಾಧ್ಯಾಯಿಯು ಅವರಿಗೆ--"ನೀನು ಬ್ರಾಹ್ಮಣನಿದ್ದಾಗ್ಯೂ ನಿನಗೆ ಸಂಸ್ಕೃತ ಭಾಷೆಯ ಗಂಧವಿಲ್ಲ. ನೀನು ಪಾರ್ಶೀ ಭಾಷೆಯನ್ನು ಕಲಿತಿರುತ್ತೀ" ಎಂದು ಅವರಿಗೆ ಚೇಷ್ಟೆಯನ್ನು ಮಾಡಿದನು. ಇದರಿಂದ ತೀರ್ಥರಾಮರು ತಮ್ಮ ಮನಸ್ಸಿಗೆ ಬಹಳ ಹಚ್ಚಿಕೊಂಡು ಸಂಸ್ಕೃತ ಭಾಷೆಯನ್ನು ಮೊದಲಿನಿಂದಲೂ ಕಲಿತು ಅದರಲ್ಲಿಯೇ ೧ನೇ ನಂಬರು ಪಡೆದರು. ಆದುದರಿಂದ ಅವರಿಗೆ ದೊಡ್ಡ ವಿದ್ಯಾರ್ಥಿವೇತನವು ಅಂದರೆ ತಿಂಗಳಿಗೆ ೬೦ ರುಪಾಯಿಗಳ ವಿದ್ಯಾರ್ಥಿವೇತನವು ದೊರಕಿತು. ಈ ಪ್ರಕಾರ ತೀರ್ಥರಾಮರು ಎಫ್. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದ ಬಳಿಕ ಮುಂದೆ ಎರಡು ವರ್ಷಗಳ ತನಕ ಬಿ. ಎ. ಪರೀಕ್ಷೆಯ ಅಭ್ಯಾಸವನ್ನು ಮಾಡಹತ್ತಿದರು. ತೀರ್ಥರಾಮರಿಗೆ ಹೆಚ್ಚು ವಿದ್ಯಾರ್ಥಿವೇತನವು ದೊರಕಿದ ವರ್ತಮಾನವನ್ನು ಕೇಳಿ ಅವರ ತಂದೆಯು ಅವರ ಕಡೆಗೆ ಅವರ ಹೆಂಡತಿಯನ್ನು ಕಳುಹಿಸಿದನು. ತೀರ್ಥರಾಮರು ಅಭ್ಯಾಸಮಾಡುವಾಗ ಅವರ ತಂದೆಯು ಅವರ ಹೆಂಡತಿಯನ್ನು ಕಳಿಸಿಕೊಡದಿದ್ದರೆ ನಡೆಯುತ್ತಿತ್ತು. ಆದರೆ ಅವರ ತಂದೆಯ ಮನಸ್ಸಿನಲ್ಲಿ ಮೊದಲಿನಿಂದಲೂ ಅವರು ಕಾಲೇಜಿಗೆ ಹೋಗಿ ಅಭ್ಯಾಸ ಮಾಡಬೇಕೆಂದು ಇದ್ದಿಲ್ಲ. ಅವರು ಏನಾದರೂ ಕೆಲಸವನ್ನು ಹಿಡಿದುಕೊಂಡು ತಮ್ಮ ಮತ್ತು ತಮ್ಮ ಹೆಂಡತಿಯ ಉಪಜೀವನವನ್ನು ಸಾಗಿಸಿಕೊಳ್ಳಬೇಕೆಂತಲೇ ಅವನ ಮನಸ್ಸಿನಲ್ಲಿತ್ತು. ಆದುದರಿಂದ ಅವನು ಈ ಹಂಚಿಕೆಯನ್ನು ಮಾಡಿದನು. ಆದರೂ ಇದರಿಂದ ತೀರ್ಥರಾಮರ ಮನಸ್ಸು ತಿರುಗ

ಲಿಲ್ಲ. ಆ ಬಳಿಕ ಸುಮಾರು ಒಂದು ವರ್ಷದ ಮೇಲೆ ಹಿರಾನಂದನು ತನ್ನ ಸೊಸಿಯನ್ನು ಲಾಹೋರಿನಿಂದ ತಿರುಗಿ ಕರೆಸಿಕೊಂಡನು.

ಈ ಒಂದು ವರ್ಷದಲ್ಲಿ ತೀರ್ಥರಾಮರು ತಮ್ಮ ಹಣದಲ್ಲಿಯೇ ತಮ್ಮ ಮನೆಯ ಬಾಡಿಗೆ, ಪುಸ್ತಕಗಳ ವೆಚ್ಚ, ಕಾಲೇಜದ ಫೀ ಮತ್ತು ಸಂಸಾರದ ವೆಚ್ಚ ಇವುಗಳನ್ನೆಲ್ಲ ಸಾಗಿಸಿಕೊಂಡು ಹೋದರು. ಇಷ್ಟೆಲ್ಲ ಅವರು ಹೇಗೆ ಸಾಗಿಸಿಕೊಂಡು ಹೋದರೆಂಬುವದು ಬಹಳ ಆಶ್ಚರ್ಯವಿರುತ್ತದೆ. ಒಂದು ತಿಂಗಳ ಅವರಿಗೆ ತಮ್ಮ ಅಭ್ಯಾಸದ ಪುಸ್ತಕಗಳನ್ನು ಕೊಂಡಕೊಳ್ಳಬೇಕಾಗಿತ್ತು. ಅದಕ್ಕಾಗಿ ಅವರ ವಿದ್ಯಾರ್ಥಿವೇತನದ ಮುಕ್ಕಾಲು ಮೂರು ಪಾಲು ಹಣವು ವೆಚ್ಚವಾಗಿ ಹೋಯಿತು. ಆದುದರಿಂದ ಅವರು ಆ ಇಡೀ ತಿಂಗಳು ದಿವಸಕ್ಕೆ ೯ ಪೈಯಿಂತೆ ವೆಚ್ಚಮಾಡಿ ತಮ್ಮ ಉಪಜೀವನವನ್ನು ಸಾಗಿಸಿದರು! ಒಂದು ತಿಂಗಳು ಅವರಿಗೆ ತಾವು ಸಾಮಾನು ತಂದ ಅಂಗಡಿಯವನ ಲೆಕ್ಕವನ್ನು ಕೊಡಬೇಕಾಗಿತ್ತು. ಆದುದರಿಂದ ಅವರು ಅದನ್ನು ತೀರಿಸಿ ಆ ತಿಂಗಳದಲ್ಲಿ ಒಂದು ಹೊತ್ತು ಉಂಡು ಒಂದು ಹೊತ್ತು ಉಪವಾಸವಿದ್ದರು! ಒಂದೊಂದು ಸಾರೆ ಇಡೀ ದಿವಸ ಉಪವಾಸ ಬಿದ್ದು ಅದರಿಂದ ಉಳಿದಂಥ ಹಣದಿಂದ ತಮ್ಮ ರಾತ್ರಿಯ ಅಭ್ಯಾಸಕ್ಕೋಸ್ಕರ ದೀಪಕ್ಕೆ ಎಣ್ಣೆಯನ್ನು ತರುತ್ತಿದ್ದರು. ಈ ಪ್ರಕಾರ ತೀರ್ಥರಾಮರು ಬಡತನದ ಕಷ್ಟವನ್ನು ಅನುಭೋಗಿಸುತ್ತಿದ್ದಾಗ ಅವರ ಉಡುಪುಗಳು ಅವರ ಬಡತನಕ್ಕೆ ತಕ್ಕಂತೆಯೇ ಇದ್ದವು. ಅವರ ಮೈಯಲ್ಲಿ ಒಂದು ದೇಶೀ ಅರಿವೆಯ ಷರ್ಟು, ಒಂದು ಪಂಜಾಬೀ ಚಣ್ಣ ಮತ್ತು ತಲೆಗೆ ಸುತ್ತಲಿಕ್ಕೆ ಒಂದು ಫೇಟಾ ಈ ಪ್ರಕಾರ ಇದ್ದು ಅವರ ಕಾಲೊಳಗೆ ಯಾವಾಗಲು ದೇಶೀ ಜೋಡು (ಚಢಾವು) ಗಳು ಇರುತ್ತಿದ್ದವು. ಅವರಿಗೆ ಬೂಟು ಮೆಡುವದು ಗೊತ್ತೇ ಇದ್ದಿಲ್ಲ. ಅವರು ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಬಳಿಕ ಯುನಿವ್ಹರ್ಸಿಟಿಯ ಪದವೀದಾನ ಸಮಾರಂಭ (Convocation Hall) ಕ್ಕೆ ಹೋಗುವ ಕಾಲಕ್ಕೆ ಕಾಲೊಳಗೆ ಬೂಟು ಇಲ್ಲದೆ ಹೋಗುವದಕ್ಕೆ ಪ್ರತಿಬಂಧವಿದ್ದುದರಿಂದ ಅವರು ಹೊಸದಾಗಿ ಬೂಟುಗಳನ್ನು ಕೊಂಡು ಅವುಗಳ ಉಪಯೋಗವನ್ನು ಸಹ ಹೊಸದಾಗಿಯೇ ಕಲಿತರು. ಒಂದುಸಾರೆ ಮಳೆಯು ಬಹಳ ಬಂದು ದಾರಿಯು ಕೆಸರಾದ ಕಾಲಕ್ಕೆ ಅವರ ಒಂದು ಕಾಲೊ

ಳಗಿನ ಜೋಡು ಎಲ್ಲಿಯೋ ಜಾರಿ ಬಿದ್ದು ಹೋಯಿತು. ಆಗ ಅವರು ಮರು ದಿವಸ ತಮ್ಮ ಒಂದು ಹಳೇ ಜೋಡಿನ ಜೊತೆಗೆ ಒಬ್ಬ ಹೆಂಗಸಿನ ಇನ್ನೊಂದು ಹಳೇ ಜೋಡನ್ನು ಹಾಕಿಕೊಂಡು ಕಾಲೇಜಿಗೆ ಹೋದರು. ಮುಂದೆ ತೀವ್ರ ವಾಗಿಯೇ ಒಂಬತ್ತು ಕಾಲಾಣೆ ಕೊಟ್ಟು ಹೊಸ ಜೋಡನ್ನು ವಾರಲಿಕ್ಕೆ ತೆಗೆದುಕೊಂಡರು. ಅವರು ಈ ತರದಿಂದ ಬಡತನದ ತಾಪತ್ರಯವನ್ನು ಅನು ಭೋಗಿಸುತ್ತಿದ್ದಾಗ್ಯೂ ಯಾವಾಗಲು ಆನಂದವೃತ್ತಿಯಿಂದಲೇ ಇದ್ದು ಬಹಳ ಶ್ರಮಪಟ್ಟು ಬಿ. ಎ. ತರಗತಿಯ ಅಭ್ಯಾಸವನ್ನು ಮಾಡಿದರು. ಅವರಿಗೆ ತಾವು ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಮೊದಲೇ ನಂಬರು ಬರುತ್ತೇವೆಂಬ ವಿಶ್ವಾಸ ವಿತ್ತು. ಆದರೆ ಆ ವರ್ಷ ದುರ್ದೈವದಿಂದ ಯುನಿವ್ಹರ್ಸಿಟಿಯ ಪರೀಕ್ಷೆಯಲ್ಲಿ ಏನೋ ಅಕ್ರಮವು ಸಂಭವಿಸಿದ್ದರಿಂದ ಅವರು ಆ ವರ್ಷ ಬಿ. ಎ. ಪರೀಕ್ಷೆ ಯಲ್ಲಿ ತೇರ್ಗಡೆಯಾಗಲಿಲ್ಲ. ಅವರಿಗೆ ಇಂಗ್ಲಿಷ ವಿಷಯದಲ್ಲಿ ಮೂರು ಗುಣ ಗಳು ಮಾತ್ರ ಕಡಿಮೆಯಾದವು. ಇದರಿಂದ ಅವರಿಗೆ ಬಹಳ ದುಃಖವೆನಿಸಿತು. ಅವರು ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದ ನಂತರ ರ್‍ಯಾಂಗಲರ ಪರೀಕ್ಷೆ ಯ ಅಭ್ಯಾಸದ ಸಲುವಾಗಿ ಇಂಗ್ಲಂಡಕ್ಕೆ ಹೋಗುವವರಿದ್ದರು. ಅದಕ್ಕಾಗಿ ಅವರು ತಮಗೆ ವಿದ್ಯಾರ್ಥಿವೇತನವು ದೊರಕಬೇಕೆಂದು ಸರಕಾರಕ್ಕೆ ಅರ್ಜಿ ಯನ್ನು ಸಹ ಮಾಡಿದ್ದರು. ಆದರೆ ಅವರು ಆ ವರ್ಷ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಇದ್ದುದರಿಂದ ಸರಕಾರದವರು ಆ ವಿದ್ಯಾರ್ಥಿವೇತನವನ್ನು ಪುಣೆಯ ಪರಾಂಜಪೆಯವರಿಗೆ ಕೊಟ್ಟರು. ಇದರಿಂದ ತೀರ್ಥರಾಮರಿಗೆ ಬಹಳ ನಿರಾಶೆಯಾದುದಲ್ಲದೆ ಅವರ ೬೦ ರುಪಾಯಿಗಳ ವಿದ್ಯಾರ್ಥಿವೇತನವು ಸಹ ನಿಂತುಹೋಯಿತು. ಅವರ ತಂದೆಯಂತೂ ಅವರಿಗೆ ಒಂದು ಪೈ ಸಹಾ ಸಹಾ ಯಮಾಡುತ್ತಿದ್ದಿಲ್ಲ. ಆಗ ಅವರು ನಿರಾಶೆಯಿಂದ ಕಣ್ಣೀರು ಉದುರಿಸುತ್ತ ಒಂದು ರಾತ್ರಿ ತಮ್ಮ ಕೋಣೆಯಲ್ಲಿ ಕುಳಿತು ಕೆಳಗೆ ಬರೆದ ಪ್ರಕಾರ ಶ್ರೀಕೃ ಷ್ಣನನ್ನು ಭಕ್ತಿಪೂರ್ವಕವಾಗಿ ಪ್ರಾರ್ಥಿಸಿದರು.

**ತ್ವಮೇವ ಮಾತಾ ಪಿತಾ ತ್ವಮೇವ ।**
**ತ್ವಮೇವ ಬಂಧುಃ ಸಖಾ ತ್ವಮೇವ ॥**
**ತ್ವಮೇವ ವಿದ್ಯಾ ದ್ರವಿಣಂ ತ್ವಮೇವ ।**
**ತ್ವಮೇವ ಸರ್ವ ಮಮ ದೇವ ದೇವ ॥ ೧ ॥**

ಈ ಪ್ರಕಾರ ಅವರು ಭಗವಂತನಿಗೆ ಪ್ರಾರ್ಥಿಸಿ ಮಲಗಿಕೊಂಡ ನಂತರ ಮರುದಿವಸವೇ ಅವರಿಗೆ ಕೆಳಗೆ ವಿವರಿಸಿದ ಪ್ರಕಾರದ ಸಹಾಯವು ದೊರಕಿತು:-

(೧) ಕಾಲೇಜದ ಮಿಠಾಯಿ ಮಾರುವ ಝುಂಡೂಮಲ್ಲನು ತೀರ್ಥರಾಮರ ಬಳಿಗೆ ಬಂದು ಅವರಿಗೆ ದಿನಾಲು ತನ್ನ ಮನೆಯಲ್ಲಿ ಭೋಜನ ಮಾಡಬೇಕೆಂದು ವಿನಂತಿ ಮಾಡಿಕೊಂಡನು. (೨) ತೀರ್ಥರಾಮರ ಸೋದರ ಮಾವನಾದ ಪಿ. ರಘುನಾಥಮಲ್ಲ ಅಸಿಸ್ಟಂಟ ಸರ್ಜನ್ನನು ತೀರ್ಥರಾಮರಿಗೆ ತಾನು ಪ್ರತಿ ತಿಂಗಳಿಗೆ ೨೦|೨೫ ರುಪಾಯಿಗಳನ್ನು ಕಳಿಸುತ್ತೇನೆಂದು ಒಂದು ಪತ್ರವನ್ನು ಬರೆದನು. (೩) ಅವರ ಕಾಲೇಜದ ಪ್ರಿನ್ಸಿಪಾಲರು ಅವರಿಗೆ ತಾವು ಫೀ ಕೊಡುತ್ತೇವೆಂದು ಹೇಳಿದರು.

ಈ ಪ್ರಕಾರ ತೀರ್ಥರಾಮರಿಗೆ ಭಗವಂತನ ಕೃಪೆಯಿಂದ ಸಹಾಯವು ಒದಗಲು ತೀರ್ಥರಾಮರು ಪುನಃ ಕಾಲೇಜಿಗೆ ಹೋಗಲಿಕ್ಕೆ ಹತ್ತಿ ಎಡೆಬಿಡದೆ ತಮ್ಮ ಅಭ್ಯಾಸವನ್ನು ಮಾಡಹತ್ತಿದರು. ಈ ತಮ್ಮ ಅನಾನುಕೂಲತೆಯ ವೇಳೆಯಲ್ಲಿಯೂ ಅವರು ಕೆಲವು ಬಡ ಸಹಾಧ್ಯಾಯಿಗಳಿಗೆ ಧರ್ಮಾರ್ಥವಾಗಿ ಕಲಿಸಹತ್ತಿದರು. ಪರೀಕ್ಷೆಯ ವೇಳೆಯು ಸಮೀಪ ಬಂದಾಗ ಅವರಿಗೆ ಫೀ ತುಂಬಲಿಕ್ಕೆ ಆಗಲಿಲ್ಲ. ಆಗ ಅವರಿಗೆ ಅವರ ಮೇಲೆ ಯಾವಾಗಲು ಪ್ರೀತಿ ಮಾಡುವಂಥ ಗಣಿತದ ಪ್ರೊಫೆಸರ ಗಿಲ್ಬರ್ಟನ್ ಎಂಬವರು ಅವರನ್ನು ಕರೆದು ಅವರ ಕೈಯಲ್ಲಿ ಮೂವತ್ತು ರುಪಾಯಿಗಳನ್ನು ಹಾಕಿದ ಒಂದು ಕಾಗದದ ಲಕೋಟೆಯನ್ನು ಕೊಟ್ಟರು. ತೀರ್ಥರಾಮರು ತಮಗೆ ಈ ರೀತಿಯಿಂದ ಬಂದ ಹಣದಿಂದ ಪರೀಕ್ಷೆಯ ಫೀಯನ್ನು ತುಂಬಿ ಪರೀಕ್ಷೆಗೆ ಕುಳಿತರು. ಈ ಸಾರೆ ಅವರಿಗೆ ತಾವು ಪರೀಕ್ಷೆಯಲ್ಲಿ ಉತ್ತೀರ್ಣರಾಗುತ್ತೇವೆಂದು ಬಲವಾದ ವಿಶ್ವಾಸವಿದ್ದಮೇರೆಗೆ ಅವರು ಉತ್ತೀರ್ಣರಾದರು. ಗಣಿತವು ಅವರ ಪ್ರೀತಿಯ ವಿಷಯವಿದ್ದು ಪರೀಕ್ಷಕರು ಗಣಿತದ ಕಾಗದದೊಳಗೆ ೧೩ ಪ್ರಶ್ನೆಗಳನ್ನು ಹಾಕಿ ಉಮೇದವಾರರು ತಮಗೆ ಬೇಕಾದ ಒಂಬತ್ತು ಪ್ರಶ್ನೆಗಳನ್ನು ಬಿಡಿಸಬೇಕೆಂದು ಹೇಳಿದ್ದರು. ಇತರ ವಿದ್ಯಾರ್ಥಿಗಳಿಗೆ ೩-೪ ಪ್ರಶ್ನೆಗಳನ್ನು ಬಿಡಿಸಬೇಕಾದರೆ ನಾಕಾಗಿ ಹೋಗಿತ್ತು. ಆದರೆ ತೀರ್ಥರಾಮರು ಹದಿಮೂರು ಪ್ರಶ್ನೆಗಳನ್ನು ಬಿಡಿಸಿ ೧೫೦ ರಲ್ಲಿ ೧೪೫ ಗುಣಗಳನ್ನು ದೊರಕಿಸಿದರು. ಹಾಗೂ ಬಟ್ಟಿನ

ಮೇಲೆ ಬಿ. ಎ. ಪರಿಕ್ಷೆಯನ್ನು ಮೊದಲನೇ ತರಗತಿಯೊಳಗೆ ತೇರ್ಗಡೆಯಾಗಿ ಮೊದಲನೇ ನಂಬರು ದೊರಕಿಸಿದರು. ಇದರಿಂದ ಅವರಿಗೆ ಪುನಃ ೬೦ ರೂ ಪಾಯಿಗಳ ವಿದ್ಯಾರ್ಥಿವೇತನವು ದೊರಕಹತ್ತಿತು. ಹಾಗೂ ಒಂದು ಸುವ ರ್ಣಪದಕ ಮತ್ತು ಒಂದು ಗೌನು (ನಿಲುವಂಗಿ) ಮುಂತಾದ ಇನಾಮುಗಳು ದೊರಕಿದವು. ಈ ಕಾಲಕ್ಕೆ ಅವರು ಇಪ್ಪತ್ತು ವರ್ಷ ಪ್ರಾಯದವರಿದ್ದರು. ಅವರು ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರ ಎಮ್. ಎ. ಪರೀಕ್ಷೆಯ ಅಭ್ಯಾಸವನ್ನು ಮಾಡುವದಕ್ಕಾಗಿ ಲಾಹೋರದ ಸರಕಾರಿ ಕಾಲೇಜಿಗೆ ಹೋ ದರು. ಅವರಿಗೆ ಮೊದಲಿನಿಂದಲೂ ಎರಡನೆಯವರಿಗೆ ಕಲಿಸುವಲ್ಲಿ ಬಹಳ ಪ್ರೀತಿಯು ಇತ್ತು. ಆದುದರಿಂದ ಅವರು ತಮಗೆ ಎಷ್ಟು ಅವಸರದ ಕೆಲಸ ವಿದ್ದಾಗ್ಯೂ ಅದನ್ನು ಒಂದು ಬದಿಗೆ ಇಟ್ಟು ತಮ್ಮ ಸಹಾಧ್ಯಾಯಿಗಳಿಗೂ ಇತರ ಬಡ ವಿದ್ಯಾರ್ಥಿಗಳಿಗೂ ಕಲಿಸುತ್ತಿದ್ದರು. ಈಗ ತಾವು ಬಿ. ಎ. ಪರೀಕ್ಷೆ ಯಲ್ಲಿ ಉತ್ತೀರ್ಣರಾದ ಬಳಿಕ ತಮ್ಮ ಮೊದಲಿನ ಕಾಲೇಜದಲ್ಲಿ ಬಿ. ಎ. ವಿದ್ಯಾರ್ಥಿಗಳಿಗೆ ಗಣಿತ ಕಲಿಸುವ ಕೆಲಸವನ್ನು ಏನೂ ಸಂಬಳ ತೆಗೆದುಕೊ ಳ್ಳದೆ ಮಾಡಹತ್ತಿದರು. ಈ ರೀತಿಯಿಂದ ಅವರು ತಾವು ವಿದ್ಯೆ ಕಲಿತ ಕಾಲೇ ಜಿನ ಅಂಶತಃ ಋಣವನ್ನು ತೀರಿಸಹತ್ತಿದರು. ಅವರು ವಿದ್ಯಾರ್ಥಿಗಳಲ್ಲಿಯೂ, ಪ್ರೊಫೆಸರರಲ್ಲಿಯೂ, ಸಹಾಧ್ಯಾಯಿಗಳಲ್ಲಿಯೂ ಬಹಳ ಪ್ರಿಯರಾಗಿದ್ದರು. ಅವರು ಕಾಲೇಜದಲ್ಲಿ ವಿದ್ಯಾರ್ಥಿಯಾಗಿರುವಾಗ ಯಾವಪ್ರಕಾರ ಇರುತ್ತಿದ್ದ ರೆಂಬ ಸಂಗತಿಯು ಅವರು ಭಗತ ಧನ್ನಾಜಿಗೆ ಬರೆದ ಈ ಕೆಳಗಿನ ಪತ್ರದ ಮೇಲಿಂದ ತಿಳಿಯುತ್ತದೆ. ಅದೇನಂದರೆ:--

" ಲಾಹೋರ

ತಾ. ೯ ನೇ ಫೇಬ್ರುವಾರಿ ೧೮೯೪ ರಾತ್ರಿ ೧೧ ಘಂಟೆ.

" ನಿಮ ಕೃಪಾಪತ್ರವು ಮುಟ್ಟಿ ನನ್ನ ಮನಸ್ಸಿಗೆ ಬಹಳ ಆನಂದವಾ ಯಿತು. ನಾನು ದಿನಾಲು ಬೆಳಿಗ್ಗೆ ೫ ಘಂಟೆಯಿಂದ ೭ ಘಂಟೆಯ ವರೆಗೆ ಅಭ್ಯಾಸಮಾಡುತ್ತೇನೆ. ಆ ಮೇಲೆ ಸ್ನಾನಮಾಡಿ ವ್ಯಾಯಾಮ ಮಾಡುತ್ತೇನೆ. ಅದನ್ನು ಮುಗಿಸಿಕೊಂಡು ನನ್ನ ಪ್ರೊಫೆಸರರ ಮನೆಗೆ ಹೋಗುತ್ತೇನೆ. ಅಲ್ಲಿಗೆ ಹೋಗುವಾಗ ಓದುತ್ತ ಹೋಗುತ್ತೇನೆ. ಅಲ್ಲಿ ಹೋದನಂತರ ಅವರ ಬಳಿ

ಯಲ್ಲಿ ಒಂದು ತಾಸು ಹೊತ್ತು ಕುಳಿತುಕೊಳ್ಳುತ್ತೇನೆ. ಅನಂತರ ಊಟ ಮಾಡಿಕೊಂಡು ಅವರ ಸಂಗಡವೇ ಅವರ ಗಾಡಿಯಲ್ಲಿ ಕಾಲೇಜಿಗೆ ಹೋಗುತ್ತೇನೆ. ಮನೆಗೆ ಬರುವಾಗ ದಾರಿಯಲ್ಲಿ ಹಾಲು ಕುಡಿಯುತ್ತೇನೆ. ಮನೆಯಲ್ಲಿ ಐದು ನಿಮಿಷಗಳ ವರೆಗೆ ಕುಳಿತು ರಾವಿ ನದಿಯ ಮಗ್ಗುಲಿಗೆ ಗಾಳಿಯನ್ನು ತೆಗೆದುಕೊಳ್ಳಲಿಕ್ಕೆ ಹೋಗಿ ಆ ನದಿಯ ದಂಡೆಯ ಮೇಲೆ ಸುಮಾರು ಅರ್ಧ ತಾಸಿನ ಪರಿಯಂತರ ಅತ್ತಿತ್ತ ತಿರುಗಾಡುತ್ತೇನೆ. ಅಲ್ಲಿಂದ ತಿರುಗಿ ಬರುವಾಗ ನಗರದೊಳಗಿನ ಹಸರು ಹುಲ್ಲಿನ ಶೀತಲವಾದ ತೋಟಗಳಲ್ಲಿ ಕೆಲವು ಹೊತ್ತು ಅಡ್ಡಾಡುತ್ತೇನೆ. ಆ ಬಳಿಕ ಮನೆಗೆ ಬಂದು ಮೇಲಟ್ಟದ ಮೇಲೆ ಅಭ್ಯಾಸ ಮಾಡುತ್ತ ಇತ್ತಿಂದ ಅತ್ತ, ಅತ್ತಿಂದ ಇತ್ತ ಅಡ್ಡಾಡುತ್ತೇನೆ. ಇಷ್ಟರಲ್ಲಿ ಕತ್ತಲವಾಗುತ್ತದೆ. ಆಗ ನಾನು ತಿರುಗಿ ವ್ಯಾಯಾಮ ಮಾಡುತ್ತೇನೆ. ಹಾಗೂ ದೀಪವನ್ನು ಹಚ್ಚಿಕೊಂಡು ೭ ಘಂಟೆಯವರೆಗೆ ಅಭ್ಯಾಸಮಾಡುತ್ತೇನೆ. ಆಮೇಲೆ ನಾನು ಊಟಕ್ಕೆ ಹೋಗುತ್ತೇನೆ. ಮತ್ತು ಪ್ರೇಮಜಿಯನ್ನು ಕಾಣಲಿಕ್ಕೆ ಹೋಗುತ್ತೇನೆ. ಅಲ್ಲಿಂದ ಬಂದಮೇಲೆ ೧೦-೧೨ ನಿಮಿಷಗಳವರೆಗೆ ಮನೆಯಲ್ಲಿ ವ್ಯಾಯಾಮ ಮಾಡುತ್ತೇನೆ. ಅನಂತರ ಹತ್ತು ಘಂಟೆಯವರೆಗೆ ಅಭ್ಯಾಸ ಮಾಡುತ್ತೇನೆ. ನಮ್ಮ ಹೊಟ್ಟೆಯನ್ನು ಉತ್ತಮಸ್ಥಿತಿಯಲ್ಲಿಟ್ಟರೆ ಪೂರ್ಣ ಆನಂದವು ಅಥವಾ ಸುಖವು, ಏಕಾಗ್ರಚಿತ್ತವು, ಪರಮೇಶ್ವರನ ಸ್ಮರಣವು ಮತ್ತು ಅಂತಃಕರಣದ ಪವಿತ್ರತೆಯು ಸಹಜವಾಗಿ ಪ್ರಾಪ್ತವಾಗುತ್ತವೆಂತಲೂ, ಬುದ್ಧಿಯು ಮತ್ತು ಧಾರಣಶಕ್ತಿಯು ಚನ್ನಾಗಿ ಇರುತ್ತವೆಂತಲೂ ನನ್ನ ಅನುಭವಕ್ಕೆ ಬಂದಿರುತ್ತದೆ. ಆದುದರಿಂದ **ನಾನು ಬಹಳ ಸ್ವಲ್ಪ ಉಣ್ಣುತ್ತೇನೆ. ಹಾಗೂ ಉಂಡದ್ದನ್ನೆಲ್ಲ ಚನ್ನಾಗಿ ಪಚನಮಾಡುತ್ತೇನೆ.** ”

ತೀರ್ಥರಾಮರು ಸನ್ನ ೧೮೯೨ ನೇ ಇಸ್ವಿಯಲ್ಲಿ ಗಣಿತವನ್ನು ತೆಗೆದುಕೊಂಡು ಎಮ್. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ತಮ್ಮ ಯುನಿವ್ಹರ್ಸಿಟಿಯಲ್ಲಿ ಮೊದಲನೇ ನಂಬರು ಪಡೆದರು. ಆ ವರ್ಷ ಗಣಿತದ ಪ್ರಶ್ನೆಗಳು ಬಹಳ ಕಠಿಣವಿದ್ದವು. ಮುಂಚೆ ಎಂದೂ ಹಿಂದುಸ್ಥಾನದ ಯಾವದೂ ಯುನಿವ್ಹರ್ಸಿಟಿಯಲ್ಲಿ ಇಂಥ ಕಠಿಣ ಪ್ರಶ್ನೆಗಳನ್ನು ಹಾಕಿದ್ದಿಲ್ಲವೆಂದು ಸ್ವತಃ ತೀರ್ಥರಾಮರು ಯಾವಾಗಾದರೂ ಅನ್ನುತ್ತಿದ್ದರು.

ತೀರ್ಥರಾಮರ ಅಸಾಮಾನ್ಯ ಬುದ್ಧಿಸಾಮರ್ಥ್ಯವನ್ನು ನೋಡಿ ಲಾಹೋರ ಸರಕಾರಿ ಕಾಲೇಜದ ಪ್ರಿನ್ಸಿಪಾಲರಾದ ಡಬ್ಲ್ಯು. ಬೆಲ್ ಎಂಬವರು ಬಹಳ ಸಂತೋಷಪಟ್ಟು ಅವರಿಗೆ ಈ ಸಾರೆ ಪ್ರಾವ್ಹಿನ್ಸಿಯಲ್ ಸಿವ್ಹಿಲ್ ಸರ್ವಿಸ ಪರೀಕ್ಷೆಗೆ ನಿಮ್ಮ ಹೆಸರನ್ನು ಕಳಿಸುತ್ತೇವೆಂದು ಹೇಳಿದರು. ಆದರೆ ತೀರ್ಥರಾಮರು ತಮ್ಮ ಪ್ರಿನ್ಸಿಪಾಲರಿಗೆ—"ನಾನು ಇಷ್ಟು ಶ್ರಮಮಾಡಿ ಕಲಿತ ವಿದ್ಯೆಯನ್ನು ಎರಡನೆಯವರಿಗೆ ಮಾರಿಕೊಳ್ಳುವದಿಲ್ಲ. ಆದರೆ ಅದನ್ನು ಎರಡನೆಯವರೊಳಗೆ ಹಂಚುತ್ತೇನೆ. ಅಧಿಕಾರ ನಡೆಸುವ ಕಾಮದಾರನಾಗುವದಕ್ಕಿಂತ ಅಧ್ಯಾಪಕನಾಗಿರುವದು ನನಗೆ ಹೆಚ್ಚು ಸೇರುತ್ತದೆ" ಎಂದು ವಿನಯದಿಂದ ಉತ್ತರಕೊಟ್ಟರು. ತೀರ್ಥರಾಮರು ಸಿವ್ಹಿಲ್ ಸರ್ವಿಸ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ದೊಡ್ಡ ಅಧಿಕಾರಿಯಾಗಿ ಕೀರ್ತಿಯನ್ನು ಪಡೆಯುವದಕ್ಕಿಂತ ವಿಶ್ವೇಶ್ವರನ ವಿದ್ಯಾಲಯದಲ್ಲಿ ಉತ್ತೀರ್ಣರಾಗಿ ತಮ್ಮ ಜನ್ಮವನ್ನು ಸಾಫಲ್ಯಮಾಡಿಕೊಳ್ಳಬೇಕೆಂದು ಪರಮೇಶ್ವರನ ಸಂಕೇತವಿದ್ದುದರಿಂದ ತೀರ್ಥರಾಮರಿಗೆ ಈ ಪ್ರಕಾರದ ಬುದ್ಧಿಯು ಹುಟ್ಟಿತೆಂದು ಅನ್ನಲಿಕ್ಕೆ ಅಡ್ಡಿಯಿಲ್ಲ! ತೀರ್ಥರಾಮರು ಮೇಲ್ಕಂಡ ತಮ್ಮ ಸ್ವಂತ ಪತ್ರದಲ್ಲಿ ಹೇಳಿದಂತೆ ಸ್ವಲ್ಪ ಉಣ್ಣುತ್ತಿದ್ದರು ಹಾಗೂ ನಿಯಮಿತವಾಗಿ ವ್ಯಾಯಾಮ ಮಾಡುತ್ತಿದ್ದರು. ಇದಲ್ಲದೆ ಅವರಿಗೆ ಚಿಕ್ಕಂದಿನಿಂದ ಅವರ ಬಡತನದ ಮೂಲಕ ಹಲವು ತರದ ಶಾರೀರಿಕ ಮತ್ತು ಮಾನಸಿಕ ಕ್ಲೇಶಗಳನ್ನು ಅನುಭೋಗಿಸಬೇಕಾಗುತ್ತಿತ್ತು. ಹೀಗಿದ್ದರೂ ಅವರು ವಿದ್ಯಾರ್ಥಿದಶೆಯಲ್ಲಿರುವಾಗ ಬಿಟ್ಟೂಬಿಡದೆ ಅತಿಶಯ ಶ್ರಮದಿಂದ ಹಿಂದುಸ್ಥಾನದ ಯುನಿವ್ಹರ್ಸಿಟಿಯ ಅತಿ ಶ್ರೇಷ್ಠವಾದ ಎಮ್. ಎ. ಪರೀಕ್ಷೆಯ ತನಕ ಅಭ್ಯಾಸಮಾಡಿ ಅದರಲ್ಲಿ ಉತ್ತೀರ್ಣರಾದರು. ಆದುದರಿಂದ ಅವರು ಎಮ್. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದಾಗ ಅವರ ಪ್ರಕೃತಿಯು ಬಹಳ ಅಶಕ್ತವಾಗಿತ್ತು. ಅವರಿಗೆ ಮೇಲಿಂದಮೇಲೆ ಜ್ವರವು ಬರುತ್ತಿದ್ದವು. ಅವರಿಗೆ ತಲೆಶೂಲಿಯಂತೂ ಯಾವಾಗಲು ಇರುತ್ತಿತ್ತು. ಇದಲ್ಲದೆ ಅವರಿಗೆ ಮಲಬದ್ಧತೆಯ ಉಪದ್ರವವು ಇತ್ತು. ಆದುದರಿಂದ ಅವರ ಮೈಯೊಳಗಿನ ಮಾಂಸವೆಲ್ಲವು ಹೊರಟು ಹೋಗಿ ಅವರ ಎಲವುಗಳು ಮಾತ್ರ ಕಾಣುತ್ತಿದ್ದವು. ಅವರ ಕುತ್ತಿಗೆಯು ಉದ್ದವಾಗಿತ್ತು ಮತ್ತು ಅವರ ಧ್ವನಿಯು

ಗೊಗ್ಗರವಾಗಿತ್ತು. ಇದರಿಂದ ಅವರಿಗೆ ಮಾತಾಡಲಿಕ್ಕೆ ಸಹ ಕಷ್ಟವಾಗುತ್ತಿತ್ತು. ಇಂಥ ಸ್ಥಿತಿಯಲ್ಲಿ ಅವರು ಹೇಗೆ ಜೀವಂತ ಉಳಿದಿರಬಹುದೆಂದು ಅನೇಕರಿಗೆ ಆಶ್ಚರ್ಯವೆನಿಸುತ್ತಿತ್ತು. ಆದರೆ ಅವರು ಮಿತಾಹಾರವನ್ನು ಮಾಡಿದ್ದರಿಂದ ಮತ್ತು ಬ್ರಹ್ಮಚರ್ಯವನ್ನು ಯೋಗ್ಯರೀತಿಯಿಂದ ಪಾಲಿಸಿದ್ದರಿಂದ ಅವರು ಇಷ್ಟು ದಿವಸ ಇಂಥ ತಾಪದಲ್ಲಿಯೂ ಜೀವದಿಂದ ಉಳಿದಿರಬೇಕೆಂದು ಕಾಣುತ್ತದೆ. ಅವರ ಲಕ್ಷ್ಯವು ಯಾವಾಗಲು ಪಾರಮಾರ್ಥದ ಬಗ್ಗೆ ಇರುತ್ತಿತ್ತು. ಇತ್ತ ನೋಡಿದರೆ ಅವರ ಶರೀರವು ಮಾತ್ರ ಬಹಳ ಅಶಕ್ತವಿತ್ತು. ಆದುದರಿಂದ ತೀರ್ಥರಾಮರು '**ಶರೀರಮಾದ್ಯಂ ಖಲುಧರ್ಮಸಾಧನಂ**' ಎಂಬ ವಚನದ ಯಥಾರ್ಥವನ್ನು ತಿಳಿದುಕೊಂಡು ತಮ್ಮ ಶರೀರ ಸುಧಾರಣೆಯನ್ನು ಮಾಡಿಕೊಳ್ಳುವ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಡಹತ್ತಿದರು. ಆಗಿನ ಕಾಲಕ್ಕೆ ಈಗಿನಂತೆ ಔಷಧಗಳ ಅಥವಾ ಪಾಕಗಳ ಸುಳಿದಾಟವು ವಿಶೇಷವಿದ್ದಿಲ್ಲ. ಅವರು ದಿನಾಲು ಹೆಚ್ಚು ವ್ಯಾಯಾಮ ಮಾಡಹತ್ತಿದರು. ಅವರ ಮುಖ್ಯವಾದ ಆಹಾರವು ಹಾಲು ಮತ್ತು ಅಕ್ಕಿಯ ಅನ್ನ. ಅವರು ಎಮ್. ಎ. ಪರೀಕ್ಷೆಯಲ್ಲಿದ್ದಾಗ ಬರೀ ಹಾಲಿನ ಮೇಲೆ ಇರುತ್ತಿದ್ದರೆಂದು ಮೇಲೆ ಹೇಳಿರುತ್ತೇವೆ. ಅವರು ಎಮ್. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಮೇಲೆ ಸಹ ಹಾಲು ಕುಡಿಯುವ ಅಭ್ಯಾಸವನ್ನು ಬಿಡಲಿಲ್ಲ. ಅವರು ಹಾಲು ಕುಡಿಯುವ ಅಭ್ಯಾಸವನ್ನು ದಿನಾಲು ಬೆಳೆಸುತ್ತ ಹೋಗಿ ಒಂದು ಸರತಿಗೆ ಐದ್ಯೆದು ಸೇರು ಹಾಲು ಕುಡಿಯಹತ್ತಿದರು. ನಾಲ್ಕು ಕಾಲಿನ ಮಂಚವನ್ನು ಮೇಲಕ್ಕೆ ಎತ್ತಿ ಹೌರಗೆ ಕೆಳಗೆ ಇಳಿಸುವದು, ಎದೆಯನ್ನು ಸೆಟಿಸಿ ನಿಂತು ಎರಡೂ ಕ್ಯೆಗಳನ್ನು ಮೋರೆಯ ಎದುರಿಗೆ ತೆಗೆದುಕೊಂಡು ಅವುಗಳನ್ನು ದೂರ ಸರಿಸುತ್ತ ತಮ್ಮ ಭುಜದ ಸರಳ ರೇಷೆಯಲ್ಲಿ ಒಯ್ದು ಅವುಗಳನ್ನು ಪುನಃ ತಮ್ಮ ಮೋರೆಯ ಮುಂದೆ ತರುವದು, ಯೋಗಾಸನವನ್ನು ಹಾಕಿ ಕೂಡ್ರುವದು, ಪ್ರಾಣಾಯಾಮಮಾಡುವದು, ಇವುಗಳು ಅವರ ಅಂಗಸಾಧನಗಳಾಗಿದ್ದವು. ಈ ಅಂಗ ಸಾಧನಗಳು ಅವರ ಆರೋಗ್ಯ ಸುಧಾರಣೆಗೆ ಮುಖ್ಯ ಕಾರಣಗಳಾದವು. ಮೇಲಾಗಿ ಮಿತಾಹಾರ, ಬ್ರಹ್ಮಚರ್ಯ, ಸದಾಚಾರ ಮತ್ತು ದುರ್ವ್ಯಸನತ್ಯಾಗ ಇವುಗಳು ಅವರ ವ್ಯಾಯಾಮಕ್ಕೆ ಸರ್ವ ಪರಿಯಿಂದಲೂ ಸಹಾಯವಾದವು.

ಇದರಿಂದ ಅವರ ಶರೀರವು ಬಹಳ ಸುಧಾರಿಸಿತು. ಮತ್ತು ಅವರು ಹಿಮಾಲಯದ ಪ್ರದೇಶದಲ್ಲಿ ಇಪ್ಪತ್ತು ಇಪ್ಪತ್ತೈದು ಮೈಲುಗಳ ತನಕ ಸಹಜವಾಗಿ ಅಡ್ಡಾಡಹತ್ತಿದರು. ಕೌಪಿನ ಮತ್ತು ಕಂಬಳಿ ಇವಿಷ್ಟೇ ಸಾಮಗ್ರಿಯಿಂದ ಅವರು **ಗಂಗೋತ್ರಿ, ಜಮನೋತ್ರಿ, ಬದರೀನಾಥ** ಇವುಗಳಂಥ ಎತ್ತರವಾದ ಶಿಖರಗಳನ್ನು ಹತ್ತಲಿಕ್ಕೂ, ಗಂಗೋತ್ರಿಯಂಥ ಬರ್ಫಮಯವಾದ ಸ್ಥಳದಲ್ಲಿ ಪ್ರವಾಸವನ್ನು ಮಾಡಲಿಕ್ಕೂ ಶಕ್ತರಾದರು. ತೀರ್ಥರಾಮರು ತೀರ ಎತ್ತರವಾದ ಮತ್ತು ಅತಿಶಯ ಚಳಿಯುಳ್ಳ ಗುಡ್ಡಗಳಲ್ಲಿಯೂ, ನಿರ್ಜನವಾದ ಮತ್ತು ಭಯಂಕರವಾದ ಗುಹೆಗಳಲ್ಲಿಯೂ ಇರುತ್ತಿದ್ದರು. ಅವರು ಮಧ್ಯ ರಾತ್ರಿಯಲ್ಲಿ ಸಹ ದುಷ್ಟ ಶ್ವಾಪದಗಳ ಬಗ್ಗೆಯಾಗಲಿ ಅಥವಾ ಇತರ ಯಾವ ಕಾರಣದ ಬಗ್ಗೆಯಾಗಲಿ ಹೆದರದೆ ಅರಣ್ಯದಲ್ಲಿ ಅಡ್ಡಾಡುತ್ತಿದ್ದರು. ಅವರು ಮಳೆಯು ಸುರಿಯುತ್ತಿರುವಾಗ ನದಿಯ ಪ್ರವಾಹದಿಂದ ತೇಲಿ ಹೋಗುತ್ತಿದ್ದ ದನ ಕರುಗಳನ್ನು ನದಿಯ ತೀರಕ್ಕೆ ತರುವಷ್ಟು ಶಕ್ತಿಯುಳ್ಳವರಾಗಿದ್ದರು. ಅವರು ಅಮೇರಿಕೆಯಲ್ಲಿರುವಾಗಂತೂ ಒಂದುಸಾರೆ ವಿನೋದಕ್ಕಾಗಿ ೪೦ ಮೈಲುಗಳ ಶರ್ಯತಿನಲ್ಲಿ ತಾವೂ ಓಡಿ ಆ ಶರ್ಯತಿನೊಳಗೆ ಇನಾಮನ್ನು ಗೆದ್ದಂಥ ಮನುಷ್ಯನಿಗಿಂತ ಎರಡು ತಾಸು ಮೊದಲೇ ಅವನು ಮುಟ್ಟತಕ್ಕ ಸ್ಥಳವನ್ನು ಮುಟ್ಟಿದರು. ಇದಲ್ಲದೆ ಮತ್ತೊಂದು ಸಾರೆ ಅಮೇರಿಕೆಯಲ್ಲಿಯ ಎತ್ತರವಾದ ಶಷ್ಟಾ ಪರ್ವತವನ್ನು ಅನೇಕ ಮಂದಿ ಅಮೇರಿಕನ್ನ ಸ್ಪರ್ಧೆಗಾರರ ಜೊತೆಯಲ್ಲಿ ಹತ್ತಿ ಅವರೆಲ್ಲರಿಗಿಂತ ತಾವೇ ಮುಂದೆ ಹೋದರು. ಆದರೆ ಈ ಬಗ್ಗೆ ಅವರಿಗೆ ಇನಾಮು ಕೊಡಹೋದರೆ ಅವನು ಅದನ್ನು ಸ್ವೀಕಾರ ಮಾಡಲಿಲ್ಲ. ಸಾರಾಂಶ—ಹಿಂದಕ್ಕೆ ಅಶಕ್ತರೂ, ಕೃಶರೂ, ಪುಕ್ಕರೂ ಆಗಿದ್ದಂಥ ತೀರ್ಥರಾಮರು ಈಗ ಇಷ್ಟು ಸಶಕ್ತರೂ, ಧೈರ್ಯಸ್ಥರೂ ಆದರೆಂಬುವದನ್ನು ನೋಡಿ ಯಾರಿಗೆ ಆನಂದವಾಗಲಿಕ್ಕಿಲ್ಲ? ಇದರ ಮುಖ್ಯಕಾರಣವು ಉಜ್ವಲವಾದ ಬ್ರಹ್ಮಚರ್ಯವಲ್ಲವೇ?

## ಗೃಹಸ್ಥಾಶ್ರಮವು.

ತೀರ್ಥರಾಮರು ವಿದ್ಯಾರ್ಥಿದಶೆಯಲ್ಲಿರುವಾಗಲೇ ಗೃಹಸ್ಥಾಶ್ರಮಿಗಳಾಗಿದ್ದರು. ಆದರೂ ಅವರ ಸಂಸಾರವು ಅವರು ಎಮ್. ಎ. ಪದವಿಧರರಾದ

ತರುವಾಯ ಅಂದರೆ ಅವರು ೨೨ ವರ್ಷ ಪ್ರಾಯದವರಾದ ತರುವಾಯು ಆರಂಭವಾಯಿತು. **ಸರ್ವಾರಂಭಾಸ್ತಂಡುಲಾಃ ಪ್ರಸ್ಥಮೂಲಾಃ** ಎಂಬಂತೆ ತಂಡುಲವು (ದ್ರವ್ಯವ್ಯವು) ಸಂಸಾರದ ಅಥವಾ ಬಹು ಪಾಲಿಗೆ ಇಡೀ ಜೀವಿತ ಯಾತ್ರೆಯ ಮುಖ್ಯ ಸೂತ್ರವಿರುವದರಿಂದ ತೀರ್ಥರಾಮರು ತಮ್ಮ ಉದರ ನಿರ್ವಾಹದ ಅನುಕೂಲವನ್ನು ಮಾಡಿಕೊಳ್ಳಬೇಕಾಯಿತು. ಅವರಲ್ಲಿ ವಿದ್ಯಾರ್ಥಿಗಳಿಗೆ ಕಲಿಸುವ ಉತ್ಸಾಹವು ಅತಿಶಯುವಿದ್ದುದರಿಂದ ಅವರು ಎಫ್. ಎ. ಮತ್ತು ಬಿ. ಎ. ವಿದ್ಯಾರ್ಥಿಗಳಿಗೆ ಗಣಿತವನ್ನು ಕಲಿಸುವ ಒಂದು ಸ್ವಂತ ವರ್ಗವನ್ನು ತೆರೆದರು. ಇದಕ್ಕಾಗಿ ಅವರು ಎಫ್. ಎ. ವಿದ್ಯಾರ್ಥಿಗಳ ಕಡೆಯಿಂದ ಪ್ರತಿ ತಿಂಗಳು ಹತ್ತು ರುಪಾಯಿ ಮತ್ತು ಬಿ. ಎ. ವಿದ್ಯಾರ್ಥಿಗಳ ಕಡೆಯಿಂದ ಹದಿನೈದು ರುಪಾಯಿ ಫೀ ತೆಗೆದುಕೊಳ್ಳುತ್ತಿದ್ದರು. ಈ ವರ್ಗಕ್ಕೆ ಕಾಲೇಜದೊಳಗಿನ ಇಬ್ಬರು ಪ್ರೊಫೆಸರರು ಸಹ ಗಣಿತ ಕಲಿಯಲಿಕ್ಕೆ ಬರುತ್ತಿದ್ದರು. ಇಷ್ಟರ ಮೇಲಿಂದ ಈ ಗಣಿತವರ್ಗದಲ್ಲಿ ತೀರ್ಥರಾಮರು ಹೇಗೆ ಕಲಿಸುತ್ತಿದ್ದರು ಹಾಗೂ ಈ ಗಣಿತವರ್ಗದ ಯೋಗ್ಯತೆಯು ಎಷ್ಟಿತ್ತು ಎಂಬುದು ಸಹಜವಾಗಿ ಲಕ್ಷ್ಯದಲ್ಲಿ ಬರಬಹುದು. ಈ ಗಣಿತ ಕಲಿಸುವ ವರ್ಗವನ್ನು ಅವರು ಕೆಲವು ತಿಂಗಳುಗಳ ಪರಿಯತರ ನಡೆಸಿದ ತರುವಾಯ ಬೇನೆಬಿದ್ದ ಕಾರಣ ಅವರು ತಮ್ಮ ಮನೆಗೆ ಮುರಲೀವಾಲಾಕ್ಕೆ ಹೋಗಬೇಕಾಯಿತು.

ಅಲ್ಲಿ ಅವರಿಗೆ ಗುಣವಾದ ನಂತರ ಅವರು ಲಾಹೋರಕ್ಕೆ ತಿರುಗಿ ಬಂದು ಸನಾತನ ಧರ್ಮದ ಶಿಕ್ಷಣ ಮಂಡಲದ ಸದಸ್ಯರಾಗಿ ಹಿಂದುಗಡೆ ಅದರ ಕಾರ್ಯದರ್ಶಿಗಳಾದರು. ಇದೇ ಕಾಲದಿಂದ ಅವರ ಸಮಾಜಸೇವೆಯು ಆರಂಭವಾಯಿತೆಂದು ಅನ್ನಬಹುದು. ಇದೇ ಕಾಲಕ್ಕೆ ಅವರು ವೇದಿಕ್ ಕಾಲೇಜದಲ್ಲಿ ಚಿತ್ರಕಲೆಯ ಜ್ಞಾನವನ್ನು ಸಂಪಾದನ ಮಾಡಿದರು. ಅವರು ಬೇನೆಬಿದ್ದ ಕಾರಣ ಅವರು ತೆರೆದಂಥ ಗಣಿತ ವರ್ಗವು ನಿಂತುಹೋದ್ದರಿಂದ ಅವರಿಗೆ ತಮ್ಮ ಉಪಜೀವನ ಮಾಡಿಕೊಳ್ಳುವದು ಕಷ್ಟವಾಗಹತ್ತಿತು. ಆಗ ಅವರಿಗೆ ಸಿಯಾಲ ಕೋಟದ ಮಿಶನ್ ಹಾಯಸ್ಕೂಲಿನಲ್ಲಿ ೮೦ ರುಪಾಯಿ ಸಂಬಳದ ಕೆಲಸವು ಸಿಕ್ಕಿತು. ಅವರು ಅಲ್ಲಿ ಹೋದ ತರುವಾಯ ಅವರ ಪ್ರೇಮಲ ಸ್ವಭಾವದ ಸಲುವಾಗಿಯೂ, ಅವರ ಗಣಿತದ ಅಸಾಮಾನ್ಯ ಜ್ಞಾನ

ದ ಸಲುವಾಗಿಯೂ ಆ ಹಾಯಸ್ಕೂಲಿನಲ್ಲಿ ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚಾಗಹತ್ತಿತು. ತೀರ್ಥರಾಮರು ಅಧ್ಯಾಪಕರಾಗಿದ್ದರೂ ಅವರು ತಮಗೆ ವಿದ್ಯಾರ್ಥಿದಶೆಯಲ್ಲಿದ್ದಾಗ ಆದ ಕಷ್ಟಗಳನ್ನು ಎಂದೂ ಮರೆತಿರಲಿಲ್ಲ. ಅಂತೇ ಅವರು ತಮ್ಮ ಛಾತ್ರವರ್ಗದ ಸಂಗಡ ಬಹಳ ಪ್ರೇಮದಿಂದಲೂ, ಸಹಾನುಭೂತಿಯಿಂದಲೂ, ಸಲಿಗೆಯಿಂದಲೂ ವರ್ತಿಸುತ್ತಿದ್ದರು. ಅವರು ತಮ್ಮ ಹತ್ತರ ಇರುತ್ತಿದ್ದ ತಮ್ಮ ಛಾತ್ರವರ್ಗದವರಿಗೆ (ವಿದ್ಯಾರ್ಥಿಗಳಿಗೆ) ಅವರು ಬೇಡಿದ್ದನ್ನು ಕೊಡುತ್ತಿದ್ದರು. ಎಷ್ಟೋ ಹುಡುಗರು ತೀರ್ಥರಾಮರ ಹೆಸರಿನಿಂದ ಮಿಠಾಯಿ ಮಾರುವವನ ಅಂಗಡಿಯಲ್ಲಿ ಹಾಲು ಮತ್ತು ಮಿಠಾಯಿ ತೆಗೆದುಕೊಳ್ಳುತ್ತಿದ್ದರು. ತೀರ್ಥರಾಮರ ಸಂಸಾರವು ಹೊಸದಾಗಿ ಆರಂಭವಾಗಿತ್ತು. ಅಂದಮೇಲೆ ಅವರಿಗೆ ಆ ಕಾಲಕ್ಕೆ ಕೌಟುಂಬಿಕ ತೊಂದರೆಗಳು ವಿಶೇಷವಿರುವದು ಸಹಜವು. ಹೀಗಿದ್ದರೂ ಅವರು ತಮ್ಮ ಸಂಬಳದಲ್ಲಿಯ ಕೆಲವು ಹಣವನ್ನು ವಿದ್ಯಾರ್ಥಿಗಳ ಸಲುವಾಗಿ ವೆಚ್ಚಮಾಡುತ್ತಿದ್ದರು. ಇದರ ಬಗ್ಗೆ ಅವರನ್ನು ಎಷ್ಟು ಪ್ರಶಂಸೆ ಮಾಡಿದರೂ ಕಡಿಮೆಯೇ ಸರಿ.

ತೀರ್ಥರಾಮರು ಒಂದು ವರ್ಷ ಶಿಕ್ಷಕ ಕೆಲಸವನ್ನು ಮಾಡಿದ ತರುವಾಯ ಅವರ ಕಡೆಗೆ ಆ ಸಾಲೆಯ ಬೋರ್ಡಿಂಗ ಹೌಸ ಸುಪ್ರಿಂಟೆಂಡೆಂಟ ಕೆಲಸವು ಬಂದಿತು. ಇದರಿಂದ ಅವರಿಗೂ ವಿದ್ಯಾರ್ಥಿಗಳಿಗೂ ವಿಶೇಷ ನಿಕಟ ಸಂಬಂಧವು ಆಗಲಿಕ್ಕೆ ಹತ್ತಿತು. ಹಾಗೂ ಅವರಿಂದ ಅವರ ವಿದ್ಯಾರ್ಥಿಗಳ ನಡತೆಯ ಮೇಲೆ ಒಂದು ಯೋಗ್ಯ ಪ್ರಕಾರದ ಪರಿಣಾಮವಾಗಲಿಕ್ಕೆ ಹತ್ತಿತು. ಆದರೆ ಆ ವಿದ್ಯಾರ್ಥಿಗಳ ದುರ್ದೈವದಿಂದ ಅವರಿಗೆ ಬೇಗನೆ ಲಾಹೋರದ ಫೋರಮನ್ ಕ್ರಿಶ್ಚನ್ ಕಾಲೇಜದಲ್ಲಿ (ಅವರು ಮೊದಲಿಗೆ ಕಲಿತಂಥ ಕಾಲೇಜದಲ್ಲಿ) ಗಣಿತ ಪ್ರೊಫೆಸರ ಕೆಲಸವು ದೊರಕಿದ್ದರಿಂದ ಅವರು ಸಿಯಾಲಕೋಟದ ಮಿಶನ್ ಹಾಯಸ್ಕೂಲವನ್ನು ಬಿಟ್ಟು ಬೇಗನೆ ಲಾಹೋರಿಗೆ ತೆರಳಬೇಕಾಯಿತು. ಅವರು ಫೋರಮನ್ ಕ್ರಿಶ್ಚನ್ ಕಾಲೇಜದಲ್ಲಿ ಗಣಿತ ಪ್ರೊಫೆಸರರಿದ್ದಾಗಲೇ ಅಲ್ಲಿಯ ಓರಿಯಂಟಲ್ ಕಾಲೇಜದ ರೀಡರ ಕೆಲಸವನ್ನು ಮಾಡುತ್ತಿದ್ದರು. ಅವರು ಈ ಕೆಲಸಗಳನ್ನು ಮಾಡುವದರಿಂದ ಬಂದ ಎಲ್ಲ ಸಂಬಳದ ವಿನಿಯೋಗವನ್ನು ತಮ್ಮ ಸಂಸಾರಕ್ಕೆ ಮಾತ್ರ ಉಪಯೋಗಿಸುತ್ತಿದ್ದಿಲ್ಲ.

ಆದರೆ ಅದರಲ್ಲಿಯು ಕೆಲವು ಭಾಗವನ್ನು ಬಡ ಮತ್ತು ಯೋಗ್ಯ ವಿದ್ಯಾರ್ಥಿಗಳಿಗೆ ಕೊಡುತ್ತಿದ್ದರು. ತೀರ್ಥರಾಮರು ಈಗ ಸಮಾಜದಲ್ಲಿ ಒಂದು ವಿಶೇಷವಾದ ಯೋಗ್ಯತೆಯನ್ನು ಪಡೆದಿದ್ದಾಗ್ಯೂ ಅವರು ಸಾಮಾನ್ಯ ಜನರಂತೆ ಉತ್ತಮ ಉಡಿಗೆ ತೊಡಿಗೆ ಮಾಡುವಲ್ಲಿ ಅಥವಾ ಕುದುರೆ ರಥ ಮೊದಲಾದವುಗಳನ್ನು ಇಡುವಲ್ಲಿ, ಇಲ್ಲವೆ ಚಾಹಾ ಕಾಫಿ ಸೋಡಾ ಕುಡಿಯುವಲ್ಲಿ ಮತ್ತು ಸಿಗರೆಟ್ ಸೇದುವ ಮುಂತಾದ ಸಭ್ಯತನದ ವ್ಯಸನಗಳನ್ನು ಮಾಡುವಲ್ಲಿ ಎಂದೂ ತಮ್ಮ ಹಣವನ್ನು ವೆಚ್ಚಮಾಡಲಿಲ್ಲ. ಅಥವಾ ತಮ್ಮ ಹೆಂಡತಿಯ ಮೈಮೇಲೆ ದಾಗೀನೆ ಮಾಡಿಸುವ ಮುಂತಾದ ಸಂಸಾರದ ಕ್ಷುದ್ರ ವಿಷಯುಗಳ ಕಡೆಗೆ ಎಂದೂ ಲಕ್ಷ್ಯಕೊಡಲಿಲ್ಲ. ಅವರ ಹೆಂಡತಿಯಾದರೂ ಅವರಿಗೆ ತಕ್ಕಂಥ ಸದ್ಗುಣಿಯೇ ಇದ್ದಳು. ಅವಳು ಅವರಿಗೆ ಎಂದೂ ತನಗೆ ಉತ್ತಮ ಸೀರೆ ಕುಪ್ಪಸಗಳನ್ನು ಅಥವಾ ವಸ್ತ್ರ ಒಡಿವೆಗಳನ್ನು ತಂದುಕೊಡಿರೆಂದು ಅವರಿಗೆ ಪೀಡಿಸುತ್ತಿದ್ದಿಲ್ಲ. ಅವರು ನಿಜವಾದಂಥ ಸಹಧರ್ಮಚಾರಿಣಿಯು ಇದ್ದಳು. ಅವಳು ಅವರ ಮಾನಸಿಕ ಉನ್ನತಿಯು ಕೆಲಸಕ್ಕೆ ಎಂದೂ ಅಡ್ಡ ಬರುತ್ತಿದ್ದಿಲ್ಲ. ಅವಳು ತನ್ನ ಕೈಯಿಂದಾದಷ್ಟು ಅವರಿಗೆ ಎಲ್ಲ ರೀತಿಯಿಂದ ಸಹಾಯುವನ್ನೇ ಮಾಡುತ್ತಿದ್ದಳು. ತೀರ್ಥರಾಮರು ತಮ್ಮ ಗುರುಗಳಾದ ಭಗತ ಧನ್ನಾಜಿಗೆ ಬರೆದ ಒಂದು ಪತ್ರದ ಮೇಲಿಂದ ತೀರ್ಥರಾಮರು ಆ ಕಾಲಕ್ಕೆ ತ್ಯಾಗಿಗಳು ಅಥವಾ ಸನ್ಯಾಸಿಗಳು ಆಗಲಿಕ್ಕೆ ಹತ್ತಿದ್ದರೆಂದು ಸ್ಪಷ್ಟವಾಗಿ ಕಾಣುತ್ತದೆ. ಆ ಪತ್ರವು ಹೀಗೆ ಇರುತ್ತದೆ:—

"ಲಾಹೋರ

ತಾ. ಜೂನ ೧೮೯೭

"ನಿಮ್ಮ ಪತ್ರವು ಮುಟ್ಟಿತು. ನಾನು ಸರ್ವ ರೀತಿಯಿಂದ ನಿಮ್ಮವನೇ ಇದ್ದೇನೆ. ಯಾವ ವಸ್ತುವಿನ ಸಲುವಾಗಿಯೂ ನಾನು ವಿಶೇಷವಾಗಿ ಅಪೇಕ್ಷಿಸುವದಿಲ್ಲ. ದ್ರವ್ಯ ಸಂಗ್ರಹವು ಸುಖದ ಸಾಧನವಿರುತ್ತದೆಂದು ನಾನು ತಿಳಿಯುವದಿಲ್ಲ. ವಸ್ತ್ರ ಒಡಿವೆಗಳನ್ನು ಮಾಡಿಸುವ ವಿಚಾರವು ಅಥವಾ ಯಾವದಾದರೂ ಸಂಸಾರಿಕ ವಸ್ತುವಿನ ಸಂಗ್ರಹ ಮಾಡುವ ವಿಚಾರವು ನನ್ನ ಮನಸ್ಸಿನಲ್ಲಿ ಎಂದೂ ಬಂದಿಲ್ಲ. ನಿಮ್ಮ ಕೃಪೆಯಿಂದ ನನಗೆ ಮನೆಯು ಬದಲಾಗಿ

ಗಿಡದ ನೆರಳು, ವಸ್ತ್ರಗಳ ಬದಲಾಗಿ ಭಸ್ಮವು, ಹಾಸಿಗೆಯು ಬದಲಾಗಿ ನೆಲವು, ಮತ್ತು ಹಸಿವೆಯನ್ನು ಶಾಂತ ಮಾಡಲಿಕ್ಕೆ ಭಿಕ್ಷಾನ್ನವು ಸಿಕ್ಕರೆ ನನಗೆ ಅವುಗಳಿಂದಲೇ ಆತ್ಯಾನಂದವಾಗುವದು. ನೀವು ನನಗೆ ಭಿಕ್ಷುಕನಂತೆ ಇರಲಿಕ್ಕೆ ಅಪ್ಪಣೆಯನ್ನು ಮಾಡಿದರೆ ನಾನು ಎಲ್ಲವನ್ನು ತ್ಯಾಗ ಮಾಡಿ ಸಾಧುವಿನಂತೆ ಇರಲಿಕ್ಕೆ ನನ್ನ ಸಿದ್ಧತೆಯುಂಟು. ಕೇವಲ ಕರ್ಮವನ್ನು ಮಾಡುತ್ತ ಜೀವಿಸುವದರಿಂದ ಅಥವಾ ಪರಮಾತ್ಮನ ಅಖಂಡ ಚಿಂತನ ಮತ್ತು ಭಜನ ಮಾಡುತ್ತ ಕೂಡ್ರುವದರಿಂದ ಈ ಸೇವಕನಿಗೆ ಅತ್ಯಂತ ಸುಖವೆನಿಸುತ್ತದೆ. ಆ ಸುಖದ ಮುಂದೆ ಬಾಹ್ಯ ವಿಷಯಗಳಿಂದಾಗುವ ಸುಖವು ಮತ್ತು ಆತುರವು ತುಚ್ಛವಾಗಿ ಕಾಣುತ್ತದೆ. ಈಶ್ವರಾರ್ಪಣ ಬುದ್ಧಿಯಿಂದ ಕೆಲಸ ಮಾಡುವದರಲ್ಲಿಯೇ ನನಗೆ ಹೆಚ್ಚಾಗಿ ಸುಖವು ತೋರುತ್ತದೆ. **ಸಂಸಾರಿಕ ಪದಾರ್ಥಗಳ ಸಂಗ್ರಹದಿಂದ ನನ್ನ ಆತ್ಮವು ದೊಡ್ಡದಾಗುವದಿಲ್ಲ. ಅಥವಾ ಅವುಗಳ ಕೊರತೆಯಿಂದ ಅದು ಸಣ್ಣದಾಗುವದಿಲ್ಲ. ಅದು ಯಾವಾಗಲು ಆನಂದರೂಪದಲ್ಲಿಯೇ ಇರುತ್ತದೆ.**

ಸೇವಕ ತೀರ್ಥರಾಮ "

ಈ ಕಾಲಕ್ಕೆ ತೀರ್ಥರಾಮರು ಅಧ್ಯಾಪಕರಾಗಿದ್ದರೂ ವಿದ್ಯಾರ್ಥಿಗಳಂತೆಯೇ ಇದ್ದರು. **ಅವರ ಅಭ್ಯಾಸವು ಈಗ ವಿಶ್ವವಿದ್ಯಾಲಯದ ಪರೀಕ್ಷೆಯನ್ನು ಕೊಡಲಿಕ್ಕೆ ಸಾಗಿದ್ದಿಲ್ಲ. ಆದರೆ ಬ್ರಹ್ಮಜ್ಞಾನದ ಪ್ರಾಪ್ತಿಯನ್ನು ಮಾಡಿಕೊಡುವ ಸನ್ಯಾಸಸಂಸ್ಥೆಯ ಪರೀಕ್ಷೆಯನ್ನು ಕೊಡಲಿಕ್ಕೆ ಸಾಗಿತ್ತು.** ಅವರು ತಮ್ಮ ಗೃಹಸ್ಥಾಶ್ರಮದಲ್ಲಿಯ ಕರ್ತವ್ಯಕರ್ಮಗಳಲ್ಲಿ ಯಜನ ಮತ್ತು ಯಾಜನ ಇವೆರಡಕ್ಕೂ ಬಹಳ ಮಹತ್ವವನ್ನು ಕೊಟ್ಟಿದ್ದರು. ಅವರು ತಮ್ಮ ಅವಿದ್ಯೆಯನ್ನು ನಾಶಪಡಿಸುವದಕ್ಕೆ ಭಕ್ತಿ ಮತ್ತು ಜ್ಞಾನ ಇವುಗಳ ಹೋಮಕುಂಡವನ್ನು ಹೊತ್ತಿಸಿ ಅದರಲ್ಲಿ ತಮ್ಮ ಸಂಕುಚಿತ ಮಮತ್ವವನ್ನು ಆಹುತಿಕೊಡಲಿಕ್ಕೆ ಅಂದರೆ ಅರ್ಥಾತ್ ಆ ಸಂಕುಚಿತ ಮಮತ್ವವನ್ನು ವಿಕಾಸಗೊಳಿಸಲಿಕ್ಕೆ ಕಲಿಯಹತ್ತಿದ್ದರು. ಈ ಸಂಬಂಧವಾಗಿ ಅವರು '**ಯಜ್ಞದ ರಹಸ್ಯವು**' ಎಂಬ ವಿಷಯವನ್ನು ಕುರಿತು ಕೊಟ್ಟ ವ್ಯಾಖ್ಯಾನವು ವಾಚನೀಯವಿರುತ್ತದೆ. ಇದಲ್ಲದೆ ಅವರು

ಎಲ್ಲ ದಾನಗಳಲ್ಲಿ ಶ್ರೇಷ್ಠವಾದ ಜ್ಞಾನದಾನದ ಕೆಲಸವನ್ನು ಮಾಡುತ್ತಿದ್ದರು. ಅವರು ಗಣಿತದ ಪ್ರೊಫೆಸರರಾದ ಬಳಿಕ ತಮ್ಮ ಮೊದಲನೇ ನಿಬಂಧವನ್ನು **"ಗಣಿತವನ್ನು ಹೇಗೆ ಅಭ್ಯಾಸಮಾಡಬೇಕು?"** ಎಂಬ ವಿಷಯದ ಮೇಲೆಯೇ ಬರೆದರು. ಅದರಲ್ಲಿ ಅವರು--"ಸ್ನಿಗ್ಧಪದಾರ್ಥಗಳನ್ನು ಮತ್ತು ಬಹು ಮೌಲ್ಯವಾದ ಪಕ್ವಾನ್ನಗಳನ್ನು ಉಂಡು ಹೊಟ್ಟೆಯನ್ನು ಭಾರಮಾಡಿ ಕೊಳ್ಳುವದರಿಂದ ಬುದ್ಧಿವಂತ ಹುಡುಗನು ಸಹ ಮಂದಬುದ್ಧಿಯವನು ಮತ್ತು ಅಭ್ಯಾಸಕ್ಕೆ ಅಯೋಗ್ಯನು ಆಗುತ್ತಾನೆ. ಆದರೆ ಹೌರಗಿನ ಅನ್ನವನ್ನು ಉಣ್ಣು ವದರಿಂದ ಮಿದುಳುಗಳು ಸ್ವಚ್ಛವಾಗಿ ಉಳಿದು ಅಭ್ಯಾಸ ಮಾಡಲಿಕ್ಕೆ ಉತ್ಸಾಹವು ಬರುತ್ತದೆ. ಇದಲ್ಲದೆ ಮನಸ್ಸು ಯಾವಾಗಲು ಶುದ್ಧವಿರಬೇಕು. ಇದೇ ವಿದ್ಯಾರ್ಥಿದಶೆಯ ಯಶಸ್ಸಿನ ಗುಟ್ಟು" ಎಂದು ಉಪದೇಶ ಹೇಳಿರುತ್ತಾರೆ. ಇದಲ್ಲದೆ ಅವರು ಸಿಯಾಲಕೋಟದಲ್ಲಿ ಮತ್ತು ಲಾಹೋರದಲ್ಲಿ ಸನಾತನ ಧರ್ಮ ಸಭೆಯ ಮುಖಾಂತರ ಕೊಟ್ಟ ವ್ಯಾಖ್ಯಾನಗಳಿಂದ ಜೀವಂತ ಜ್ಞಾನ ದಾನವನ್ನು ಮಾಡಿದರು. ಈ ವ್ಯಾಖ್ಯಾನಗಳ ಯೋಗ್ಯತೆಯ ಬಗ್ಗೆ ಅವರ ಪಟ್ಟ ಶಿಷ್ಯನಾದ ನಾರಾಯಣಸ್ವಾಮಿಯು ಹೀಗೆ ಹೇಳುತ್ತಾನೆ:--"ನನ್ನ ಗುರುಗಳು ಕೃಷ್ಣಲೀಲಾ ಮತ್ತು ಕೃಷ್ಣಗೀತಾ ಇವುಗಳ ಬಗ್ಗೆ ಕೊಟ್ಟ ವ್ಯಾಖ್ಯಾನದಿಂದ ನನ್ನ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವಾಯಿತು. ನಾನು ಆ ಕಾಲಕ್ಕೆ ಶ್ರೀಕೃಷ್ಣನ ಆಚರಣವು ಗರ್ಹಣೀಯವಾದ್ದೆಂದು ತಿಳಿದುಕೊಂಡಿದ್ದೆನು. ಹಾಗೂ ಆತನ ರಾಸಲೀಲೆಯ ಬಗ್ಗೆ ಯಾವಾಗಲು ಅಸಹ್ಯಪಡುತ್ತಿದ್ದೆನು. ಗೀತೆಯ ಮೇಲೆ ನನ್ನ ವಿಶೇಷ ಶ್ರದ್ಧೆಯು ಇದ್ದಿಲ್ಲ. ಇಂಥ ನನ್ನ ಸ್ಥಿತಿಯಲ್ಲಿ ನಾನು ನನ್ನ ಗುರುಗಳ ಪ್ರೇಮಭರಿತ ವ್ಯಾಖ್ಯಾನವನ್ನು ಕೇಳಿದ ತರುವಾಯ ನನಗೆ ಗೀತೆಯನ್ನು ಓದಬೇಕೆಂತಲೂ, ಕೃಷ್ಣಲೀಲೆಯ ಮರ್ಮವನ್ನು ತಿಳಿದುಕೊಳ್ಳಬೇಕೆಂತಲೂ ಬಲವಾದ ಅಪೇಕ್ಷೆಯು ಹುಟ್ಟಿತು."

## ಶ್ರೀಕೃಷ್ಣನಲ್ಲಿ ನಿಸ್ಸೀಮ ಭಕ್ತಿ.

ತೀರ್ಥರಾಮರು ಶ್ರೀಕೃಷ್ಣನ ನಿಸ್ಸೀಮ ಭಕ್ತರಿದ್ದರು. ಅವರಿಗೆ ಗೀತಾ ವಚನದ ಬಗ್ಗೆ ಬಹಳ ಹುಚ್ಚು ಹತ್ತಿ ಹೋಗಿತ್ತು. ಅವರು ಅದರ ಗೂಢಾರ್ಥವನ್ನು ತಿಳಿದುಕೊಂಡು ಅದರಲ್ಲಿ ಸಮರಸವಾಗುವತನಕ ಅದನ್ನು ಓದಿ

ದರು. ಈ ಪ್ರಕಾರ ಗೀತೆಯನ್ನು ಪಠನ ಮಾಡಿಕೊಂಡ ಬಳಿಕ ಅವರಿಗೆ ಶ್ರೀಕೃಷ್ಣನ ನಿದಿಧ್ಯಾಸವು ಹತ್ತಿತೆಂಬುವದು ಸಹಜವಿರುತ್ತದೆ. ಬಿಸಿಲುಗಾಲದ ಬಿಡುವು ಬಂದಕೂಡಲೆ ಅವರು ಮಥುರಾ ವೃಂದಾವನಗಳಿಗೆ ಹೋಗಿ ತಮ್ಮ ಇಡೀ ಬಿಡುವನ್ನು ರಾಸಲೀಲೆಯನ್ನು ನೋಡುವಲ್ಲಿ ಕಳೆಯುತ್ತಿದ್ದರು. ಈ ರೀತಿಯಿಂದ ಶ್ರೀಕೃಷ್ಣನ ಬಗ್ಗೆ ಅವರ ಭಕ್ತಿಯು ಹೆಚ್ಚಾಗಲು ಅವರು ತಮಗೆ ಶ್ರೀಕೃಷ್ಣನ ದರ್ಶನವು ಆಗಬೇಕೆಂದು ಅಹೋರಾತ್ರಿ ಅಳುತ್ತಿದ್ದರು. ಇದರಿಂದ ಅವರ ಹಾಸಿಗೆಯ ಮೇಲಿನ ಅರಿವೆಯು ಸಹ ಅವರ ಕಣ್ಣೀರುಗಳಿಂದ ತೊಯ್ದು ಹೋಗುತ್ತಿತ್ತು. ಅವರು ಒಮ್ಮೊಮ್ಮೆ ಸಾಯಂಕಾಲದ ಕಡೆಗೆ ರಾವೀ ನದಿಯ ತೀರಕ್ಕೆ ಹೋಗಿ ಶ್ರೀಕೃಷ್ಣನ ಧ್ಯಾನದಲ್ಲಿ ಆಸಕ್ತರಾಗಿ ಕುಳಿತರೆಂದರೆ ಅವರಿಗೆ ರಾತ್ರಿ ಎಷ್ಟಾಯಿತೆಂಬದರ ಎಚ್ಚರಿಕೆಯು ಸಹ ಇರುತ್ತಿದ್ದಿಲ್ಲ.

ಭಕ್ತರ ಅಂತಃಕರಣವು ನೀರೊಳಗಿಂದ ಹೊರಗೆ ತೆಗೆದ ಮೀನದಂತೆ ಪರಮೇಶ್ವರನ ದರ್ಶನಕ್ಕಾಗಿ ತಳಮಳಿಸಹತ್ತಿತೆಂದರೆ ಅವರಿಗೆ ಹಸಿವೆ ನೀರಡಿಕೆಗಳ ನೆನಪು ಆಗುವದಿಲ್ಲ. ಅವರಿಗೆ ದೇಹದ ಎಚ್ಚರವು ಸಹ ಉಳಿಯುವದಿಲ್ಲ. ಇದು **ತುಕಾರಾಮ, ರಾಮದಾಸ, ರಾಮಕೃಷ್ಣ, ಪರಮಹಂಸ, ತುಳಸೀದಾಸ, ಕಬೀರ, ಕನಕದಾಸ, ಪುರಂದರದಾಸ** ಮುಂತಾದ ಅನೇಕ ಸಾಧುಗಳ ಚರಿತ್ರದ ಮೇಲಿಂದ ಸ್ಪಷ್ಟವಾಗಿ ತಿಳಿಯುವದು. ಪ್ರಾಣವು ಹೊರಟು ಹೋಗುವಂಥ ಸಮಯವು ಬಂದರೂ ಉಪಾಸ್ಯ ದೈವತದ ಹೊರತು ಎರಡನೇದ್ದು ಯಾವದೂ ನೆನಪಾಗದ ಬಳಿಕ ಪರಮೇಶ್ವರನು ದರ್ಶನ ಕೊಡುತ್ತಾನೆ. ಇದೇ ಪ್ರಕಾರದ ಸ್ಥಿತಿಯು ತೀರ್ಥರಾಮರದು ಆಗಿತ್ತು. ಒಂದು ಸಾರೆ ಅವರು ರಾವೀ ನದಿಯ ತೀರದ ಮೇಲೆ ಅರಣ್ಯದೊಳಗೆ ಒಬ್ಬರೇ ಅಡ್ಡಾಡುತ್ತಿದ್ದರು. ಇಷ್ಟರಲ್ಲಿ ಆಕಾಶದೊಳಗೆ ಕಪ್ಪು ಮೋಡಗಳು ಮೂಡಲಾಗಿ ತೀರ್ಥರಾಮರ ಲಕ್ಷ್ಯವು ಅವುಗಳ ಕಡೆಗೆ ಹೋಯಿತು. ಆಗ ತೀರ್ಥರಾಮರು ಒಮ್ಮೆಲೆ ದೊಡ್ಡ ಧ್ವನಿ ತೆಗೆದು ಅಳುತ್ತ—" ಹೇ ಕೃಷ್ಣಾ ! ಹೇ ಘನಶ್ಯಾಮಾ ! ಈ ಕೃಷ್ಣಮೇಘವು ನಿನ್ನ ಬಣ್ಣದ್ದೇ ಇರುತ್ತದೆ. ಇದರಿಂದ ಇದು ನನ್ನನ್ನು ವ್ಯಾಕುಲಪಡಿಸುತ್ತಿರುವದು.

ಎಲೋ ನನ್ನ ಪ್ರಿಯಕರನೇ! ನೀನು ಈ ಪ್ರಕಾರ ನನ್ನ ಕೂಡ ಏಕೆ ಕಪಟ ವನ್ನು ಮಾಡುತ್ತೀ? ನೀನು ಯಾವ ಪುಷ್ಪವಾಟಿಕೆಯಲ್ಲಿ ಅಡಗಿಕೊಂಡು ಕುಳಿತಿದ್ದಿಯೆಂಬುವದನ್ನು ನನಗೆ ಹೇಳು. ಎಲೋ ಮೇಘರಾಜನೇ! ನಿನಗೆ ಎತ್ತರದ ಮೇಲಿಂದ ಬಹಳ ಕಾಣಿಸುತ್ತದೆ. ಆದುದರಿಂದ ಕೃಷ್ಣನು ಎಲ್ಲಿರು ತ್ತಾನೆಂಬುದನ್ನು ಹೇಳು ನೋಡೋಣ. ಅಹಹ! ತಿಳಿಯಿತು. ನೀನು ಸಹ ಅವನ ಕೂಡ ಸ್ಪರ್ಧೆಯನ್ನು ಮಾಡುವದಕ್ಕಾಗಿ ನಿನ್ನ ಬಣ್ಣವನ್ನು ಕಪ್ಪು ಮಾಡಿರುತ್ತೀಯಾ? ನನಗೆ ಆ ನನ್ನ ಪ್ರಿಯಕರನ ದರ್ಶನವು ಎಂದೂ ಆಗಲಿ ಕ್ಕಿಲ್ಲವೇ? ಹಾಯ! ಹಾಯಿ! ಈ ಇಡೀ ಪೃಥ್ವಿಯು ಆ ಪ್ರಿಯಕರನಾದ ಕೃಷ್ಣನ ಹೊರತಾಗಿ ವ್ಯರ್ಥವಿರುತ್ತದೆ. ನಿನ್ನ ದರ್ಶನದ ಸಲುವಾಗಿ ನನ ಗಾಗುವ ವಿರಹ ದುಃಖವನ್ನು ನಾನು ಯಾರ ಮುಂದೆ ಬೇಡಿಕೊಳ್ಳಲಿ? ನಿನ್ನ ಗೋಸ್ಕರ ನಾನು ನನ್ನ ಆಪ್ತೇಷ್ಟರನ್ನೂ, ಬಂಧುಬಳಗದವರನ್ನೂ ಬಿಟ್ಟು ಕೊಟ್ಟೆನು. ಇನ್ನುಮೇಲೆ ನನಗೆ ನಿನ್ನ ಹೊರತು ಯಾರಿದ್ದಾರೆ? ಮೇಘರಾ ಜನೇ, ನನ್ನ ಕಣ್ಣೊಳಗಿಂದ ಒಂದೇಸವನೆ ಕಣ್ಣೀರುಗಳು ಹರಿಯುವದನ್ನು ನೀನು ಕಣ್ಣಾರೆ ನೋಡುತ್ತಿಯಷ್ಟೇ. ಅಂದಬಳಿಕ ನೀನು ಆ ಕಣ್ಣು ಮುಚ್ಚಿ ಕೊಂಡು ಕುಳಿತಿರುವ ಕೃಷ್ಣನಿಗೆ ನನ್ನ ದೈನ್ಯಾವಸ್ಥೆಯನ್ನು ತಿಳಿಸು. ಎಲಾ! ನಾನು ಇನ್ನೆಷ್ಟು ಹೊತ್ತು ನಿನ್ನ ದಾರಿಯನ್ನು ನೋಡಲಿ? ನಾನು ಇನ್ನು ತಡೆಯಲಾರೆನು. ನೀನು ನನ್ನನ್ನು ಒಮ್ಮೆ ಇಲ್ಲದಂತೆ ಮಾಡು; ಅಥವಾ ನಿನ್ನ ದರ್ಶನಾಮೃತದಿಂದ ನನ್ನ ನೀರಡಿಕೆಯನ್ನೂ, ಬಳಲಿಕೆಯನ್ನೂ ಶಾಂತಪ ಡಿಸು. ಇಲ್ಲದಿದ್ದರೆ ನನ್ನ ಜೀವದ ನಾಶವು ಸರ್ವ ರೀತಿಯಿಂದ ಆಗಿ ಹೋ ದೀತು. ಅದನ್ನು ನೀನು ದೂರಿಂದಲೇ ನೋಡುತ್ತ ನಿಂತುಕೊಂಡು ವಿನೋದ ವನ್ನು ಪಡೆ. ಸೂರ್ಯನಿಗೆ ಪ್ರಕಾಶವನ್ನು, ಚಂದ್ರನಿಗೆ ಶಾಂತಿ ಮತ್ತು ಸೌಂ ದರ್ಯವನ್ನು ಹಾಗೂ ಹೂವುಗಳಿಗೆ ಬೇರೆ ಬೇರೆ ತರದ ಬಣ್ಣವನ್ನು ಮತ್ತು ಸುವಾಸನೆಯನ್ನು ಅವುಗಳು ಬೇಡಿಕೊಳ್ಳದೆ ಇದ್ದಾಗ್ಯೂ ನೀನು ಕೊಟ್ಟಿ. ಆದರೆ ನಾನು ನಿನಗೆ ಅಂಗಲಾಚಿ ನಿನ್ನ ದರ್ಶನವನ್ನು ಬೇಡಿಕೊಳ್ಳುತ್ತೇನೆ. ಅದನ್ನು ನೀನು ನನಗೆ ಕೊಟ್ಟರೆ ನೀನೇನು ದರಿದ್ರನಾಗುವಿಯಾ? ಅದರಿಂದ ನಿನ್ನ ಸಂಪತ್ತೆಲ್ಲ ಸೂರಿಯಾಗುವದೇ? ಆದುದರಿಂದ ಕೃಷ್ಣಾ, ಇನ್ನುಮೇಲೆ

ನೀನು ನನಗೆ ದರ್ಶನವನ್ನು ಕೊಡದಿದ್ದರೆ ಈ ಶಿರಸ್ಸು ಧಡದಿಂದ ಬೇರೆಯಾಗಿ ಈ ಕಣ್ಣುಗಳು ಮಾತ್ರ ನೀನು ಬರುವ ದಾರಿಯನ್ನು ನೋಡುತ್ತ ತೆರೆದು ಕೊಂಡೇ ಇರುವವು."

ಈ ಪ್ರಕಾರ ತೀರ್ಥರಾಮರು ನುಡಿದು ಕೃಷ್ಣಾ, ಕೃಷ್ಣಾ, ಎಂದು ಒಂದೇಸವನೆ ಕೂಗುತ್ತ ವಿಸ್ಮೃತಿಯಿಂದ ಬಿದ್ದರು. ರಾತ್ರಿ ೨ ಘಂಟೆಯು ತನಕ ಅಲ್ಲಿಯೇ ಬಿದ್ದು ಬಿಟ್ಟಿದ್ದರು. ಆಮೇಲೆ ಅವರು ಬಿದ್ದುಕೊಂಡ ಸಂಗ ತಿಯು ಯಾವತ್ತರಿಗೂ ಗೊತ್ತಾಯಿತು.

ಹುಶಾರಪುರದ ವಕೀಲರಾದ ಲಾಲಾ ಅಯೋಧ್ಯಾಪ್ರಸಾದರು ಹೀಗೆ ಹೇಳುತ್ತಾರೆ:—ಒಂದು ಸಾರೆ ಲಾಹೋರದಲ್ಲಿ ಒಂದು ಗುಡಿಯೊಳಗೆ ಒಬ್ಬ ಪುರಾಣಿಕನು ರಾಮಾಯಣವನ್ನು ಹೇಳುತ್ತಿದ್ದನು. ಅದನ್ನು ಕೇಳಲಿಕ್ಕೆ ಕೂತವರೊಳಗೆ ತೀರ್ಥರಾಮರು ಸಹ ಇದ್ದರು. ತೀರ್ಥರಾಮರು ಕಥೆಯು ನ್ನು ಕೇಳುತ್ತಿರುವಾಗ ಸ್ವಲ್ಪ ಹೊತ್ತಿನಲ್ಲಿಯೇ ಸಣ್ಣ ಹುಡುಗರಂತೆ ಆಕ್ರೋ ಶಮಾಡಿ ಅಳಹತ್ತಿದರು. ಜನರು ಮತ್ತು ಪುರಾಣಿಕರು ಅವರಿಗೆ ಎಷ್ಟು ಸಮಾಧಾನ ಹೇಳಿದರೂ ಕೇಳಲಿಲ್ಲ. ಆದರೆ ಅದೆಲ್ಲ ವ್ಯರ್ಥವಾಯಿತು. ತೀರ್ಥ ರಾಮರು ಅಳುತ್ತ ವಿಸ್ಮೃತಿಯಾಗಿ ಬಿದ್ದರು. ಆಗ ಮಾತ್ರ ಪುರಾಣವನ್ನು ನಿಲ್ಲಿಸುವ ಪ್ರಸಂಗವು ಬಂದಿತು. ಕೆಲವು ಹೊತ್ತಿನ ತರುವಾಯ ತೀರ್ಥರಾ ಮರು ಎಚ್ಚರಿಕೆಯ ಮೇಲೆ ಬಂದು—"ಹೇ ಕೃಷ್ಣಾ, ನನ್ನ ಮೇಲೆ ದಯ ವಿಟ್ಟು ನನಗೆ ದರ್ಶನ ಕೊಡು. ನಾನು ಕಿಷ್ಕಿಂಧಾ ನಗರದೊಳಗಿನ ವಾನರ ನಿಗಿಂತಲು ಕಡಿಮೆ ಇರುವೆನೋ? ಅಥವಾ ಭಿಲ್ಲ ಸ್ತ್ರೀಯಗಿಂತಲು ಕ್ಷುದ್ರ ನೋ? ನೀನು ದರ್ಶನ ಕೊಡಲಾರದಿದ್ದರೆ ಇನ್ನು ಮೇಲೆ ಮಾತ್ರ ಈ ಯಾವತ್ತು ಭಕ್ತಿಯ ಪ್ರಕಾರಗಳು ಮತ್ತು ಉಪಾಯಗಳು ಒಲೆಯಲ್ಲಿ ಸುಟ್ಟು ಹೋಗಲಿ. ನಿನ್ನ ಎಲ್ಲ ಕೀರ್ತಿಯು ಹೊರಟುಹೋಗಲಿ ಹಾಗೂ ನನ್ನ ಶರೀ ರವು ನಷ್ಟವಾಗಲಿ" ಎಂಬ ಶಬ್ದಗಳನ್ನು ನುಡಿದನು.

ಇದರಂತೆ ತೀರ್ಥರಾಮರು ಸನ್ನ ೧೮೭೫ ನೇ ಇಸವಿಯ ಬೇಸಿಗೆ ಕಾಲದ ಬಿಡುವಿನಲ್ಲಿ ಒಂದು ದಿವಸ ರಾವೀ ನದಿಯ ತೀರದ ಮೇಲೆ ಅಡ್ಡಾ ಡಲಿಕ್ಕೆ ಹತ್ತಿರುವಾಗ ಅವರಿಗೆ ಒಂದು ಪಕ್ಷಿಯು ಮಂಜುಳವಾದ ಧ್ವನಿ

ಯಿಂದ ಹಾಡುವದನ್ನು ಕೇಳಿಸಿತು. ಆಗ ಅವರು ಅದರ ಕಡೆಗೆ ತಮ್ಮ ಮೋರೆಯನ್ನು ತಿರುವಿ ನಿಂತು ಹೀಗೆ ನುಡಿದರು:--" ಎಲಾ, ನಿನಗೆ ಈ ಮಂಜುಳವಾದ ಧ್ವನಿಯು ಎಲ್ಲಿಂದ ಬಂತು? ನೀನು ಆ ಕೊಳಲು ಊದುವ ಕೃಷ್ಣನನ್ನು ಕಾಣಲಿಕ್ಕೆ ಹೋಗಿ ಅವನ ಕಡೆಯಿಂದ ಈ ಮಂಜುಳ ಧ್ವನಿಯನ್ನು ಕೈಗಡ ಇಸಕೊಂಡು ಬಂದಂತೆ ಕಾಣುತ್ತದೆ. ನಿಜವಾಗಿ ನೀನು ಆತನನ್ನು ಕಂಡೆಯಾ? ಅವನನ್ನು ನಾನು ಹೇಗೆ ಮತ್ತು ಯಾವಾಗ್ಗೆ ಕಾಣಬಹುದು ಎಂಬುವದನ್ನು ಹೇಳಬಾರದೇ? ಎಲೋ ಕಣ್ಣುಗಳಿರಾ! ಆ ಪ್ರಿಯಕರ ಕೃಷ್ಣನನ್ನು ನೋಡುವ ಸಾಮರ್ಥ್ಯವು ನಿಮ್ಮಲ್ಲಿ ಇಲ್ಲದಿದ್ದರೆ ನೀವು ಈಗಿಂದೀಗಲೇ ಒಡೆದು ಹೋಗಿರಿ! ಎಲೋ ಕೈಗಳಿರಾ! ನಿಮ್ಮಿಂದ ಆತನ ಚರಣ ಸ್ಪರ್ಶ ಮಾಡುವದು ಆಗದಿದ್ದರೆ ನೀವು ಇರುವದಾದರೂ ಏತಕ್ಕೆ? ಹೋಗಿರಿ. ಉದುರಿ ಹೋಗಿರಿ. ಸುಟ್ಟು ಹೋಗಿರಿ "

ಪುನಃ ಅದೇ ತಿಂಗಳದಲ್ಲಿ ಒಂದು ಸಾರೆ ತೀರ್ಥರಾಮರು ಅಂಜಂಜುತ್ತ ಹೀಗೆ ನುಡಿದರು:--" ಎಲೌ ದೇವನೇ! ಇನ್ನು ಒಂದು ದಿವಸ ಹೋಯಿತು. ಆದರೂ ನನಗೆ ನಿನ್ನ ದರ್ಶನದ ಭಾಗ್ಯವಾಗಲಿಲ್ಲ. ದಿವಸಗಳ ಹಿಂದೆ ದಿವಸಗಳು ಹೋಗುತ್ತಲಿವೆ. ಆದರೂ ಸಹ ನಿನ್ನ ದರ್ಶನವಿಲ್ಲ! ನನ್ನ ಆಯುಷ್ಯವೆಲ್ಲ ವ್ಯರ್ಥವಾಗಿ ಹೋಗುವಂತೆ ನನಗೆ ಕಾಣುತ್ತದೆ! ಈ ಜನ್ಮದಲ್ಲಿಯಂತೂ ನಾನು ಏನಾದರೂ ಅಪರಾಧವನ್ನು ಮಾಡಿದಂತೆ ನನಗೆ ಸ್ಮರಣವಾಗಲೊಲ್ಲದು. ಒಳ್ಳೇದು. ನಾನು ಪಾಪಿಯು, ಅಪರಾಧಿಯು ಇರುತ್ತೇನೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಈಗ ನಾನು ನಿನಗೆ ಶರಣು ಬಂದಿರುತ್ತೇನಲ್ಲವೇ? ಅಂದಮೇಲೆ ದರ್ಶನಕೊಡು. ಸ್ವಲ್ಪಾದರೂ ನಿನ್ನ ಮೋರೆಯನ್ನು ತೋರಿಸು. ಹೇ ನಾಥಾ! ನಿನ್ನ ಪ್ರಾಣವನ್ನು ಕೊಡುವದರಿಂದ ನಿನ್ನ ದರ್ಶನವು ಆಗುವಂತೆ ಇದ್ದರೆ ಅದನ್ನು ತೆಗೆದುಕೋ. ಆದರೆ ದರ್ಶನ ಕೊಡು. ಈ ಪ್ರಾಣವನ್ನು ತೆಗೆದುಕೋ, ತೆಗೆದುಕೋ" ಈ ಪ್ರಕಾರ ನುಡಿದು ಅವರು ದೊಡ್ಡ ಧ್ವನಿ ತೆಗೆದು ಅಳಲಿಕ್ಕೆ ಹತ್ತಿದರು. ಅವರ ಎಲ್ಲ ಅರಿವೆಗಳು ಕಣ್ಣೀರುಗಳಿಂದ ತೊಯ್ದು ಒದ್ದಿಯಾದವು! ಹಾಗೂ ಕೊನೆಗೆ ಮೂರ್ಛಿತರಾದರು! ಸ್ವಲ್ಪ ಹೊತ್ತಿನ ತರುವಾಯ ಅವರು ಕಣ್ಣು ತೆರೆಯುಲಾಗಿ ಅವರ ಮುಂದೆ

ಒಂದು ಕೃಷ್ಣಸರ್ಪವು ಫೂತ್ಕಾರ ಮಾಡುತ್ತ ನಿಂತದ್ದನ್ನು ಕಂಡರು. ಆಗ ಅವರು ಎದ್ದು ಕುಳಿತು ಕೃಷ್ಣ, ಕೃಷ್ಣ ಎಂದು ಉಚ್ಚಾರ ಮಾಡುತ್ತ-- "ಕೃಷ್ಣಾ, ನೀನು ಈ ರೂಪದಿಂದ ನನಗೆ ದರ್ಶನ ಕೊಟ್ಟೆಯಾ?" ಎಂದು ನುಡಿದು ಪುನಃ ವಿಸ್ಮೃತಿಯಾದರು. ಆಮೇಲೆ ತುಸು ಹೊತ್ತಿನ ತರುವಾಯ ಅವರು ಎದ್ದು ನೋಡಲು ಆ ಸರ್ಪವು ಹೋಗಿತ್ತು. ಆಗ ಅವರು— "ನಾಥಾ! ನಿನ್ನನ್ನು ನಾನು ಕಂಡೆನು. ಆದರೆ ನನ್ನ ಮನಸ್ಸಿನೊಳಗಿದ್ದದ್ದು ನನ್ನ ಮನಸ್ಸಿನೊಳಗೆ ಉಳಿಯಿತು. ನನಗೆ ನಿನ್ನ ಶ್ಯಾಮಸುಂದರಮೂರ್ತಿಯನ್ನು ನೋಡುವ ಅಪೇಕ್ಷೆಯು ಬಹಳವಿರುತ್ತದೆ. ಗೋಪಿಯರು ಯಾವ ನಿನ್ನ ಸ್ವರೂಪವನ್ನು ನೋಡಿ ತಮ್ಮ ದೇಹವನ್ನು ನಿನಗೆ ನಿವಾಳಿಸಿ ಒಗೆದರು ಮತ್ತು ಆರುತಿಯನ್ನು ಮಾಡಿದರು ಆ ನಿನ್ನ ಸ್ವರೂಪವನ್ನು ನನಗೆ ಒಮ್ಮೆ ತೋರಿಸು. ಎಲೈ ಮನಮೋಹನಾ, ಕೃಷ್ಣಾ" ಎಂದು ಅನ್ನುತ್ತ ಪುನಃ ವಿಸ್ಮೃತಿಯನ್ನು ಹೊಂದಿದರು.

ಪುನಃ ಸ್ವಲ್ಪ ಹೊತ್ತಿಗೆ ತೀರ್ಥರಾಮರು ಸ್ಮೃತಿಯ ಮೇಲೆ ಬಂದ ತರುವಾಯ ಅಲ್ಲಿ ನಿಂತಿದ್ದ ಅವರ ಒಬ್ಬ ಮಿತ್ರನು--"ಗೋಸಾಂವಿಗಳೇ, ನೀವು ಯಾವ ಪರಮೇಶ್ವರನನ್ನು ಶೋಧಿಸುತ್ತಿದ್ದೀರೋ ಅವನು ಪ್ರತ್ಯಕ್ಷ ನಿಮ್ಮ ಹೃದಯದಲ್ಲಿಯೇ ಇರುತ್ತಾನೆ" ಎಂದು ಹೇಳಿದನು. ಈ ಶಬ್ದಗಳು ಅವರ ಕಿವಿಗೆ ಬಿದ್ದಕೂಡಲೆ ಅವರು ತಮ್ಮ ಹೃದಯಸ್ಥ ಪರಮೇಶ್ವರನನ್ನು ಶೋಧ ಮಾಡಿ ಆತನ ಇಷ್ಟ ದರ್ಶನವನ್ನು ತೆಗೆದುಕೊಳ್ಳುವದಕ್ಕಾಗಿ ತಮ್ಮ ಮೈಮೇಲಿನ ಅರಿವೆಗಳನ್ನು ಹರಿದು ಒಗೆದು, ಆ ಪ್ರಿಯ ಕೃಷ್ಣನ ದರ್ಶನಕ್ಕೆ ಅಡ್ಡಬಂದಿದ್ದ ಅಸ್ಥಿ ಚರ್ಮ ಮಾಂಸಗಳ ಪಂಜರವನ್ನು ಸಹ ಹರಿಯಹತ್ತಿದರು! ಹಾಗೂ ಬಾಯಿಂದ-"ಎಲಾ, ನೀನು ಇಲ್ಲಿ ಅಡಗಿಕೊಂಡು ಕುಳಿತಿದ್ದರೆ ಹೇಗೆ ಅಡಗಿಕೊಂಡು ಕೂಡ್ರುತ್ತೀ ಅಥವಾ ಹೇಗೆ ಓಡಿ ಹೋಗುತ್ತೀ ಎಂಬುವದನ್ನು ನೋಡುವೆನು" ಎಂದು ನುಡಿದು ತಮ್ಮ ಉಗುರುಗಳಿಂದ ತಮ್ಮ ಶರೀರವನ್ನು ಹರಿದು ನೆತ್ತರ ಬರುವಂತೆ ಮಾಡಿದರು. ನೆತ್ತರವು ಬರುತ್ತಿದ್ದರೂ ಇನ್ನೂ ಅವರು ತಮ್ಮ ಶರೀರವನ್ನು ಅರಿವೆಯಂತೆ ಹರಿಯುವ ಕೆಲಸವನ್ನು ನಡಿಸೇ ಇದ್ದರು!! ಈ ಭಯಂಕರ ಪ್ರಕಾರವನ್ನು ನೋಡಿ ಅವರ

ಮಿತ್ರನು ಓಡಿ ಹೋಗಿ ಅವರ ಕೈಗಳನ್ನು ಹಿಡಿದು-" ಗೋಸಾಂವಿಗಳೇ, ತಡೆಯಿರಿ ಭಗವಂತನು ನಿಮಗೆ ನಿಶ್ಚಯವಾಗಿ ದರ್ಶನವನ್ನು ಕೊಡುವನು" ಎಂದು ಹೇಳಿದನು. ಅದಕ್ಕೆ ತೀರ್ಥರಾಮರು--" ಏನು? ನಾಥನು ಹೊರಗೆ ಬರುತ್ತಾನಷ್ಟೇ. ಅವನು ಹೊರಗೆ ಬಾರದಿದ್ದರೆ ಹೇಗೆ ಹೊರಗೆ ಬರುವದಿಲ್ಲೆಂಬುವದನ್ನು ನೋಡಿಬಿಡುತ್ತೇನೆ" ಎಂದು ನುಡಿದು ಪುನಃ ಸುಮ್ಮನಾಗಿ ಸಾಯಂಕಾಲದ ಕಡೆಗೆ ಎಚ್ಚರಾದರು. ಆಗ ಅವರ ವೃತ್ತಿಯು ತೀರ ಶಾಂತವಿತ್ತು.

ರಾಮತೀರ್ಥರು ಸನಾತನ ಧರ್ಮಸಭೆಯ ವ್ಯಾಸಪೀಠದ ಮೇಲಿಂದ 'ಕೃಷ್ಣ' ಅಥವಾ 'ಭಕ್ತಿ' ಈ ವಿಷಯವನ್ನು ಕುರಿತು ವ್ಯಾಖ್ಯಾನ ಕೊಡುವಾಗ್ಗೆ ಅವರ ಕಣ್ಣೊಳಗಿಂದ ಒಂದೇಸವನೆ ಪ್ರೇಮಾಶ್ರುಗಳು ಒಂದು ಅವುಗಳಿಂದ ಅವನ ಅರಿವೆಗಳು ತೊಯ್ದು ಹೋಗುತ್ತಿದ್ದವು. ಹಾಗೂ ಶ್ರೋತೃಸಮುದಾಯವಾದರೂ ಅವರ ಸಂಗಡವೇ ಕೃಷ್ಣಭಕ್ತಿಯಲ್ಲಿ ತಲ್ಲೀನವಾಗುತ್ತಿತ್ತು. ಅವರಿಗೆ ಎಲ್ಲಿ ನೋಡಿದಲ್ಲಿ ಶ್ರೀಕೃಷ್ಣನೇ ಕಾಣುತ್ತಿದ್ದನು. ಅವನು ಇಲ್ಲದಂಥ ಸ್ಥಳವು ಅವರಿಗೆ ಒಂದೂ ಕಾಣಿಸುತ್ತಿದ್ದಿಲ್ಲ. ಈ ಪ್ರಕಾರದ ಮಾನಸಿಕ ಸ್ಥಿತಿಯು ಅವರಿಗೆ ಆದ ಬಳಿಕ ಭಗವಂತನ ದರ್ಶನವು ಅವರಿಗೆ ಲಭಿಸಿತು. ಅವರು ಒಂದು ಸಾರೆ ತಮ್ಮ ಶಿಷ್ಯನಾದ ನಾರಾಯಣಸ್ವಾಮಿಯ ಮುಂದೆ--" ನಾನು ಈವೊತ್ತು ಸ್ನಾನಮಾಡುವ ಕಾಲಕ್ಕೆ ನನ್ನ ಪ್ರಿಯಕರ ಶ್ಯಾಮಸುಂದರ ಕಾಲಿಯಾಮರ್ದನನ ದರ್ಶನವಾಯಿತು. ಆ ನನ್ನ ಪ್ರಿಯಕರನು ನನಗೆ ದೃಢಾಲಿಂಗನವನ್ನು ಕೊಟ್ಟು ಗುಪ್ತನಾದನು" ಎಂದು ಹೇಳಿದರು ಇಂಥ ಪ್ರಸಂಗಗಳು ಅವರಿಗೆ ಮೇಲಿಂದಮೇಲೆ ಸಂಭವಿಸುತ್ತಿದ್ದವೆಂದು ಅವರು ಹೇಳುತ್ತಿದ್ದರು. ಅವರು ಪ್ರತಿಯೊಂದು ಆಶೆಯನ್ನು ಮತ್ತು ಕಾಮನೆಯನ್ನು ಕೃಷ್ಣಾರ್ಪಣ ಮಾಡಿದ್ದಕ್ಕಾಗಿಯೇ ಅವರಿಗೆ ಭಗವಂತನ ದರ್ಶನವಾಯಿತು.

ಇನ್ನೂ ವರೆಗೆ ತೀರ್ಥರಾಮರು ತಮ್ಮ ಕೆಲಸದ ಮೇಲೆಯೇ ಇದ್ದರು. ಆದರೆ ಅವರ ಧಾರ್ಮಿಕ ಸ್ಥಿತಿಯು ಹೆಚ್ಚಿನ ತರಗತಿಗೆ ಹೋಗಿ ಮುಟ್ಟಿದ್ದರಿಂದ ಅವರಿಗೆ ಹೊಟ್ಟೆಯ ಸಲುವಾಗಿ ಆರಾರು ತಾಸು ಕಳೆಯುವದು ಬಹು ಅಸಹ್ಯ

ವಾಗಹತ್ತಿತು. ಆದರೂ ಅವರು ಇನ್ನೂ ತಮ್ಮ ಕೆಲಸವನ್ನು ಅವಸರದಿಂದ ಬಿಟ್ಟುಕೊಡಲಿಲ್ಲ. **"ಪ್ರಪಂಚವನ್ನು ಸಾವಧಾನದಿಂದ ಮಾಡುವವನು ಪಾರಮಾರ್ಥವನ್ನು ಮಾಡಲಿಕ್ಕ ಸಮರ್ಥನಾಗುತ್ತಾನೆ. ಪ್ರಪಂಚದಲ್ಲಿ ಅಪ್ರಮಾಣಿಕನಿರುವವನು ಪಾರಮಾರ್ಥದಲ್ಲಿಯೂ ಅಪ್ರಮಾಣಿಕನಾಗುತ್ತಾನೆ. ಆದುದರಿಂದ ಸಾವಧಾನದಿಂದ ಪ್ರಪಂಚವನ್ನು ಮಾಡದೆ ಪಾರಮಾರ್ಥವನ್ನು ಮಾಡಲಿಕ್ಕೆ ಹೋಗುವವನು ನಾನಾತರದ ದುಃಖಗಳನ್ನು ಭೋಗಿಸುತ್ತಾನೆ"** ಎಂದು ಶ್ರೀ ರಾಮದಾಸರು ತಮ್ಮ ದಾಸಬೋಧ ಗ್ರಂಥದಲ್ಲಿ ಹೇಳಿದಂತೆಯೇ ತೀರ್ಥರಾಮರ ವಿಚಾರವಿತ್ತು. ಅಂತೇ ಅವರು ತಮ್ಮೊಬ್ಬ ಮಿತ್ರನಿಗೆ ಕಳಿಸಿದ ಪತ್ರದಲ್ಲಿ--"ನಾನು ನನ್ನ ಕುಟುಂಬದ ಉದರ ಪೋಷಣದ ವ್ಯವಸ್ಥೆಯನ್ನು ಚನ್ನಾಗಿ ಮಾಡಿಟ್ಟ ಹೊರತು ನನ್ನ ಕೆಲಸವನ್ನು ಬಿಡಲಾರೆನು" ಎಂದು ಬರೆದಿದ್ದರು. ಆ ವೇಳೆಯಲ್ಲಿ ಅವರು ಆರು ತಾಸು ದುಡಿಯುವ ಕೆಲಸವನ್ನು ಮಾಡುತ್ತಿದ್ದಿಲ್ಲ. ಆದರೆ ಲಾಹೋರದ ಓರಿಯಂಟಲ್ ಕಾಲೇಜದಲ್ಲಿ ೨ ತಾಸುಗಳ ವರೆಗೆ ಮಾತ್ರ ವೇದಾಂತ ಮತ್ತು ಗಣಿತವನ್ನು ಕಲಿಸುತ್ತಿದ್ದರು.

## ವೇದಾಂತಪ್ರವೇಶ.

ಇದೇ ಸಮಯಕ್ಕೆ ದ್ವಾರಕಾಪೀಠದ ಶ್ರೀ ಜಗದ್ಗುರು ಶಂಕರಾಚಾರ್ಯ ರಾಜರಾಜೇಶ್ವರ ತೀರ್ಥಸ್ವಾಮಿಗಳು ದೈವಯೋಗದಿಂದ ಲಾಹೋರಿಗೆ ದಯಮಾಡಿಸಿದರು. ಅವರು ಉಪನಿಷತ್ತು, ಬ್ರಹ್ಮಸೂತ್ರ ಮತ್ತು ವೇದಾಂತ ಇವುಗಳಲ್ಲಿ ಅತ್ಯಂತ ನಿಪುಣರಿದ್ದರು. ಮೇಲಾಗಿ ಅವರ ವಿದ್ವತ್ತೆಯೂ, ಸ್ವರೂಪನಿಷ್ಠೆಯೂ ಸುಪ್ರಸಿದ್ಧವಿದ್ದವು. ತೀರ್ಥರಾಮರು ಲಾಹೋರದ ಸನಾತನ ಧರ್ಮಸಭೆಯ ಕಾರ್ಯದರ್ಶಿಗಳಿದ್ದದರಿಂದ ಶ್ರೀಗಳನ್ನು ಉಪಚರಿಸುವ ಮತ್ತು ಅವರ ಸೇವೆಯನ್ನು ಮಾಡುವ ಸುಪ್ರಸಂಗವು ಅವರಿಗೆ ಒದಗಿತು. ಅದನ್ನು ಅವರು ಉತ್ಸಾಹಪೂರ್ವಕವಾಗಿ ಕೊನೆಗಾಣಿಸಿದರು. ಭಕ್ತಿಯಿಂದ ಪವಿತ್ರವಾಗಿದ್ದ ತೀರ್ಥರೂಪರ ಮನೋಭೂಮಿಕೆಯು ಬ್ರಹ್ಮಜ್ಞಾನೋನ್ಮುಖವಾಗಿರುವದನ್ನು ಶ್ರೀ ದ್ವಾರಕಾಪೀಠದ ಜಗದ್ಗುರು ಶಂಕರಾಚಾರ್ಯರು

ಕಂಡು ತೀರ್ಥರಾಮರಿಗೆ ತಮ್ಮ ಸಂಗಡ ಬರಲಿಕ್ಕೆ ಕರೆದರು. ಇದನ್ನು ನೋಡಿ ತೀರ್ಥರಾಮರು ಬಹಳ ಸಂತೋಷಪಟ್ಟು ಅವರ ಸಂಗಡ ಕಾಶ್ಮೀರಕ್ಕೆ ಹೋಗಿ ಅಲ್ಲಿ ಅವರ ಪೀಠದ ಮಂತ್ರಿಗಳ ಕೆಲಸವನ್ನು ಮಾಡುತ್ತ ಬಹು ಪ್ರೇಮದಿಂದ ಶ್ರೀಗಳವರ ಸೇವೆಯನ್ನು ಮಾಡಿದರು. ಆ ಕಾಲಕ್ಕೆ ಅಲ್ಲಿ ಅವರಿಗೆ ಬ್ರಹ್ಮಸೂತ್ರಗಳನ್ನು ಮತ್ತು ಉಪನಿಷತ್ತುಗಳನ್ನು ಉತ್ತಮ ರೀತಿಯಿಂದ ಕೇಳುವ ಮತ್ತು ಅಭ್ಯಾಸಮಾಡುವ ಸುಯೋಗವು ಬಂತು. ಶುದ್ಧಪ್ರೇಮದಿಂದ ಕಲಿಸುವ ಪಂಡಿತವರ್ಯ ಗುರುಗಳೂ ಉತ್ಸಾಹದಿಂದ ಮತ್ತು ಶ್ರದ್ಧೆಯಿಂದ ಕಲಿಯುವ ಶಿಷ್ಯರೂ ಕೂಡಿದ ಬಳಿಕ ಕೇಳುವದೇನು? ತೀರ್ಥರಾಮರ ಮನಸ್ಸು ವೇದಾಂತದ ಅಭ್ಯಾಸದ ಮೇಲೆ ಪೂರ್ಣವಾಗಿ ಆಸಕ್ತವಾಯಿತು. **ಆತ್ಮಜ್ಞಾನಂ ವಿನಾ ಪಾರ್ಥ** ಎಂಬ ಗೀತೆಯೊಳಗಿನ ತತ್ವವು ಅವರಿಗೆ ಚನ್ನಾಗಿ ತಿಳಿದು ಬಂದು ಭಕ್ತಿ ಮತ್ತು ಜ್ಞಾನ ಇವುಗಳ ಸಹಕಾರಿತೆಯು ಸಹ ಒಡೆದು ಕಾಣಿಸಹತ್ತಿತು. ಆಗಿನಿಂದ ಅವರು ಶ್ರೀಗಳವರ ವಿಷಯದಲ್ಲಿ ಪೂರ್ಣ ಶ್ರದ್ಧೆಯನ್ನೂ ಪ್ರೇಮವನ್ನೂ ವಹಿಸಿ ಅವರ ಆಜ್ಞೆಯನ್ನು ಶಿರಸಾಮಾನ್ಯ ಮಾಡಹತ್ತಿದರು. ಮುಂದೆ ಕೆಲವು ದಿವಸಗಳಾದ ಬಳಿಕ ತೀರ್ಥರಾಮರ ರಜೆಯ ಕಾಲವು (ಬಿಡುವು) ಮುಗಿದದ್ದರಿಂದ ಅವರು ಶ್ರೀಗಳ ಅಪ್ಪಣೆಯನ್ನು ಪಡೆದುಕೊಂಡು ಲಾಹೋರಕ್ಕೆ ಹೊರಟು ಬಂದರು. ತೀರ್ಥರಾಮರು ಬರುವ ಕಾಲಕ್ಕೆ ಶ್ರೀಗಳು ಅವರಿಗೆ—“ನಿಮ್ಮ ಅಂತಿಮ ಅವಸ್ಥೆಯು ಪ್ರಾಪ್ತವಾಗುವ ತನಕ ನೀವು ನಿಮ್ಮ ವೇದಾಂತದ ಅಭ್ಯಾಸವನ್ನು ಬಿಡಬೇಡಿರಿ. ಅದನ್ನು ನೀವು ದಿನೇ ದಿನೇ ಬೆಳೆಸುತ್ತ ಹೋಗಿರಿ” ಎಂದು ಉಪದೇಶ ಮಾಡಿದರು.

ಈ ಪ್ರಕಾರ ತೀರ್ಥರಾಮರು ಲಾಹೋರಕ್ಕೆ ಹೊರಟು ಬಂದ ಬಳಿಕ ಅಹೋರಾತ್ರಿ ವೇದಾಂತದ ಅಭ್ಯಾಸವನ್ನು ನಡೆಸಿದರು. ತಮ್ಮ ಮತ್ತು ತಮ್ಮ ಕುಟುಂಬದ ಹೊಟ್ಟೆಯ ಸಲುವಾಗಿ ಎರಡು ಮೂರು ತಾಸು ಎರಡನೆಯವರ ಹತ್ತರ ಹೋಗಿ ದುಡಿಯುವದು ಸಹ ಅವರಿಗೆ ಅಸಹ್ಯವೆನಿಸಿತು. ಹಾಗೂ ಅವರಿಗೆ ಮಥುರಾ ಮತ್ತು ವೃಂದಾವನಕ್ಕೆ ಹೋಗುವದಕ್ಕಿಂತ ಹರಿದ್ವಾರ ಮತ್ತು ಹೃಷಿಕೇಶಗಳಿಗೆ ಹೋಗಿ ಆತ್ಮಸ್ವರೂಪದ ಪ್ರಾಪ್ತಿಯ ಸಲುವಾಗಿ ಏಕಾಂತದಲ್ಲಿ ವೇಳೆಯನ್ನು ಉಪಯೋಗಿಸುವದು ಹೆಚ್ಚು ಇಷ್ಟವಾಗಿ

ಕಂಡುಬಂತು. ಇದಕ್ಕಾಗಿಯೇ ಅವರು ಗಂಗಾನದಿಯ ತೀರದಲ್ಲಿರುವ ಹರಿದ್ವಾರದೊಳಗೆ ಸನ್ನ ೧೮೯೭ ನೇ ಇಸವಿಯೊಳಗೆ ಒಂದು ಮನೆಯನ್ನು ಬಾಡಿಗೆಯಿಂದ ಸಹ ಹಿಡಿದರು. ಅವರ ವರ್ತನದ ಮೇಲಿಂದ ಅವರು ತೀವ್ರವಾಗಿ ಸಂಸಾರವನ್ನು ತ್ಯಾಗ ಮಾಡುತ್ತಾರೆಂದು ಎಲ್ಲರಿಗೂ ಕಾಣಿಸಹತ್ತಿತು. ಇದನ್ನು ಅವರು ಅದೇ ಕಾಲಕ್ಕೆ ತಮ್ಮ ತಂದೆಗೆ ಬರೆದ ಪತ್ರದಲ್ಲಿ ಚನ್ನಾಗಿಯೇ ತಿಳಿಸಿರುತ್ತಾರೆ. ಅದರ ವಿವರ:—

" ಲಾಹೋರ

ತಾ. ೨೫ ನೇ ಅಕ್ಟೋಬರ ೧೮೯೭

ಪ್ರಿಯ ತೀರ್ಥರೂಪನೇ, ನಿಮ್ಮ ಮಗನಾದ ತೀರ್ಥರಾಮನ ಶರೀರವು ಮಾರಾಟವಾಯಿತು! ಅದು ಪರಮೇಶ್ವರನಿಗೆ ಮಾರಾಟವಾಯಿತು! ಅದು ಇನ್ನುಮೇಲೆ ನನ್ನದಲ್ಲ. ಈವೊತ್ತು ದೀಪಾವಳಿಯ ದಿವಸ ನಾನು ಜೂಜಿನಲ್ಲಿ ನನ್ನ ದೇಹವನ್ನು ಆ ಪರಮೇಶ್ವರನಿಗೆ ಕೊಟ್ಟು ಅವನನ್ನು ನಾನು ಗೆದ್ದುಕೊಂಡೆನು! ಇನ್ನು ನಿಮಗೆ ಬೇಕಾದದ್ದನ್ನೆಲ್ಲ ನನ್ನ ಒಡೆಯನ ಕಡೆಯಿಂದಲೇ ಕೇಳಿಕೊಳ್ಳಿರಿ. ಅವನು ಅದನ್ನು ನಿಮಗೆ ಕೊಡುವನು. ಅಥವಾ ನನಗೆ ಕಳಿಸಲಿಕ್ಕೆ ಅಪ್ಪಣೆಮಾಡುವನು. ಆದುದರಿಂದ ಅವನ ಮೇಲೆ ಶ್ರದ್ಧೆಯನ್ನು ವಹಿಸಿ ಅವನನ್ನು ಕೇಳಿಕೊಳ್ಳಿರಿ "

ಈಗ ತೀರ್ಥರಾಮರ ಯಾವತ್ತು ಲಕ್ಷ್ಯವು ಆತ್ಮಸಾಕ್ಷಾತ್ಕಾರದ ಕಡೆಗೆ ಹತ್ತಿತ್ತು. ಅವರಿಗೆ ಆತ್ಮಸಾಕ್ಷಾತ್ಕಾರದ ಹುಚ್ಚು ಹತ್ತಿಹೋಗಿತ್ತೆಂದರೂ ಅಡ್ಡಿಯಿಲ್ಲ. ಅವರು ಮೇಲ್ಕಂಡ ಪತ್ರವನ್ನು ಬರೆದ ನಾಲ್ಕೈದು ತಿಂಗಳಲ್ಲಿ " ಅದ್ವೈತಾಮೃತವರ್ಷಿಣಿ " ಎಂಬದೊಂದು ಸಾಧುಗಳ ಮತ್ತು ಮಹಾತ್ಮರ ಸಭೆಯನ್ನು ಪ್ರತಿವಾರಕ್ಕೊಮ್ಮೆ ನೆರೆಯಿಸಿ ಅದರಲ್ಲಿ ವೇದಾಂತ ವಿಷಯವನ್ನು ಕುರಿತು ವಾದವಿವಾದ ಮಾಡುತ್ತಿದ್ದರು. ಹಾಗೂ ಅದರಲ್ಲಿ ನಿಷ್ಕರ್ಷೆಯಾದ ಪ್ರಕಾರ ಪ್ರತಿಯೊಬ್ಬರು ಅನುಭವ ತೆಗೆದುಕೊಂಡು, ಪುನಃ ಎರಡನೇ ಸಭೆಯು ಕೂಡಿದಾಗ್ಗೆ ತಮ್ಮ ಅನುಭವವನ್ನು ತಿಳಿಸಿ, ಪುನಃ ಮುಂದಿನ ಮಾರ್ಗಕ್ಕೆ ಹತ್ತುತ್ತಿದ್ದರು. ಈ ಪ್ರಕಾರ ಆ ಸಭೆಯ ಕಾರ್ಯಕ್ರಮವು ನಡೆಯುತ್ತಿತ್ತು.

ತೀರ್ಥರಾಮರು ತಮ್ಮ ಕಾಲೇಜದಲ್ಲಿ ಎರಡು ಮೂರು ತಾಸು ಕಲಿಸುವದು ಮುಗಿದ ನಂತರ ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳನ್ನು ಅಭ್ಯಾಸ ಮಾಡುವಲ್ಲಿಯೇ ಮಗ್ನರಾಗಿರುತ್ತಿದ್ದರು. ಅವರಿಗೆ ಏಕಾಂತದಲ್ಲಿ ವಾಸಿಸುವದು ಬಹಳ ಸೇರುತ್ತಿತ್ತು. ಆದುದರಿಂದ ಅವರು ಮೇಲಿಂದಮೇಲೆ ಹೃಷಿಕೇಶ ಮತ್ತು ಹರಿದ್ವಾರಗಳಿಗೆ ಹೋಗುತ್ತಿದ್ದರು. ಹಾಗೂ ನದಿಯ ತೀರದಲ್ಲಿಯೂ, ಅರಣ್ಯದಲ್ಲಿಯೂ, ನಿರ್ಜನ ಸ್ಥಳದಲ್ಲಿಯೂ ಹೋಗಿ ತಮಗೆ ಪರಮೇಶ್ವರನ ಸಾಕ್ಷಾತ್ಕಾರವಾಗಬೇಕೆಂದು ಪ್ರಯತ್ನವನ್ನು ನಡೆಸಿದ್ದರು. ಬೇಸಿಗೆಯ ಕಾಲದ ಬಿಡುವಿನಲ್ಲಿಯಂತೂ ಅವರು ತಮ್ಮ ಎಲ್ಲ ವೇಳೆಯನ್ನು ಅಲ್ಲಿಯೇ ಕಳೆಯುತ್ತಿದ್ದರು. ಅವರು ಎರಡು ಸಾರೆ ಹೃಷಿಕೇಶಕ್ಕೂ ತಪೋವನಕ್ಕೂ ಹೋದರೂ ಅವರಿಗೆ ಸಾಕ್ಷಾತ್ಕಾರವಾಗಲಿಲ್ಲ. ಆಗ ಅವರು ಮೂರನೆ ಸಾರೆ ತಮಗೆ ಸಾಕ್ಷಾತ್ಕಾರವಾಗದೆ ತಾವು ಲಾಹೋರಿಗೆ ತಿರುಗಿ ಬರುವದಿಲ್ಲೆಂದು ಭೀಷ್ಮಪ್ರತಿಜ್ಞೆಯನ್ನು ಮಾಡಿದರು. ಆ ಕಾಲಕ್ಕೆ ತುಲಸೀದಾಸರ ಭಕ್ತಿಯು, ಚೈತನ್ಯನ ಮಧುರ ಪ್ರೇಮವು, ಆದ್ಯ ಶಂಕರಾಚಾರ್ಯರ ಸನ್ಯಾಸವೃತ್ತಿಯು, ಸಿದ್ಧಾರ್ಥಿಯ ವೈರಾಗ್ಯವು, ಧ್ರುವನ ನಿಶ್ಚಯವು ಮತ್ತು ರವೀಂದ್ರನಾಥ ಟಾಗೋರರ ಕಾವ್ಯಮಾಧುರ್ಯವು ಅವರ ರೋಮರಂಧ್ರಗಳಲ್ಲಿಯೂ ಕೂಡಿದ್ದವೆಂದು ಒಂದುವೇಳೆ ಹೇಳಿದರೆ ಅದು ಅತಿಶಯೋಕ್ತಿಯಾಗದು. ಈ ಪ್ರಕಾರ ಅವರು ದೃಢನಿಶ್ಚಯಮಾಡಿ ತಮ್ಮಲ್ಲಿದ್ದ ಮೂರು ತಿಂಗಳದ ಸಂಬಳವನ್ನು ಸಾಧುಗಳಿಗೂ, ಬೈರಾಗಿಗಳಿಗೂ, ಬಡ ಭಿಕ್ಷುಕರಿಗೂ ಕೊಟ್ಟು ತಾವು ದುಡ್ಡಿನ ಆಶೆಯಿಂದಲೂ, ಇತರ ಯಾವತ್ತು ಆಶೆಯಿಂದಲೂ ಮುಕ್ತರಾಗಿ ಬರಿಗಾಲಿನಿಂದ ಮತ್ತು ಬೊಕ್ಕನೆತ್ತಿಯಿಂದ ತಮ್ಮ ಉಪನಿಷತ್ ಗ್ರಂಥವನ್ನು ಕೈಯಲ್ಲಿ ಹಿಡಕೊಂಡು ಹರ್ಷಿಕೇಶದ ದಾರಿಯನ್ನು ಹಿಡಿದರು. ಅವರು ಅಲ್ಲಿ ಎರಡು ದಿವಸ ನಿಂತುಕೊಂಡು ತಮ್ಮ ತಪೋವನದೊಳಗಿನ ಬ್ರಹ್ಮಪುರಿಯ ಮಂದಿರಕ್ಕೆ ಬಂದು ಗಂಗಾಮಾತೆಯ ಪವಿತ್ರವಾದ ತೀರದ ಮೇಲೆ ಆಸನವನ್ನು ಹಾಕಿಕೊಂಡು--"ಹೇ ಬ್ರಹ್ಮಾನಂದಾ! ನಿನ್ನನ್ನು ಸ್ವಾಧೀನ ಮಾಡಿಕೊಂಡ ತರುವಾಯವೇ ನಾನು ಇಲ್ಲಿಂದ ಏಳುವೆನು. ಹಾಗೆ ಆಗುವ ತನಕ ನನ್ನ ದೇಹದ ಅವಸ್ಥೆಯು ಬೇಕಾದ್ದು ಆಗಲಿ. ನಾನು ಅದಕ್ಕೆ ಚಿಂತೆಮಾಡುವದಿಲ್ಲ" ಎಂದು ನುಡಿದು ಅಲ್ಲಿಯೇ ಧರಣೀ ಕೂತುಬಿಟ್ಟರು.

ಆ ಕಾಲಕ್ಕೆ ತೀರ್ಥರಾಮರು ತಮ್ಮ ತಂದೆಗೆ ಬರೆದ ಪತ್ರದಲ್ಲಿ ಹೀಗೆ ಬರೆಯುತ್ತಾರೆ:--" ಪ್ರಿಯ ತಂದೆಯೇ, ಇನ್ನು ನಿಮ್ಮ ಮಗನು ತಿರುಗಿ ಬರುವದಿಲ್ಲ. ಪ್ರಿಯ ವಿದ್ಯಾರ್ಥಿಗಳೇ, ಇನ್ನು ನಿಮ್ಮ ಗುರುವು ತಿರುಗಿ ಬರುವದಿಲ್ಲ. ಪ್ರಿಯ ಆಪ್ತೇಷ್ಟರೇ, ಇನ್ನು ನಿಮ್ಮ ಆಪ್ತನು ತಿರುಗಿ ಬರುವದಿಲ್ಲ. ನಿಮ್ಮೆಲ್ಲರ ಅಂತಃಕರಣದ ಸಂಬಂಧವು ಎಷ್ಟು ದಿವಸ ಬಾಳುವದು? ಕುರಿಯು ತನ್ನ ಮರಿಯನ್ನು ಜನರು ಕೊಲ್ಲಬಾರದೆಂದು ಎಷ್ಟು ದಿವಸ ದೇವರ ಹತ್ತರ ಹರಿಕೆಯನ್ನು ಬೇಡಿಕೊಳ್ಳುವದು? ನಿಮ್ಮೆಲ್ಲರ ಆಶೆಗಳ ಮತ್ತು ಸಂಕಲ್ಪಗಳ ಮೇಲೆ ಈ ನನ್ನ ಲೆಕ್ಕಣಿಕೆಯಿಂದ ನೀರು ಎರೆದು ಬಿಡುವೆನು! 'ರಾಮ'ನ ನಿಜಾನಂದ ಲಹರಿಯಲ್ಲಿ ಯಾವತ್ತು ದೇಶಕಾಲವರ್ತಮಾನಗಳು ಅದೃಶ್ಯವಾಗುವವು; ಮತ್ತು ರಾಮನ ದೇಹವಾದರೂ ಗಂಗಾನದಿಯ ಪ್ರವಾಹದಲ್ಲಿ ಅದೃಶ್ಯವಾಗುವದು. ಈ ಪ್ರಕಾರ ರಾಮನ ಶರೀರ ಮತ್ತು ಮನಸ್ಸು ಇವುಗಳ ಪರಿಸಮಾಪ್ತಿಯಾಗುವದು. ಸತ್ತನಂತರ ಎಲ್ಲರ ಅಸ್ಥಿಗಳು ಗಂಗೆಯಲ್ಲಿ ಬಿದ್ದೇ ಬೀಳುವವು. ಆದರೆ ನನಗೆ ಸಾಕ್ಷಾತ್ಕಾರವಾಗದಿದ್ದರೆ ನಾನು ಜೀವಂತವಿರುವಾಗಲೇ ನನ್ನ ಅಸ್ಥಿಮಾಂಸಗಳನ್ನು ಭಾಗೀರಥಿಯೊಳಗಿನ ಮೀನಗಳಿಗೆ ಅರ್ಪಣ ಮಾಡುವೆನು. 'ರಾಮ'ನ ಚರಣದಿಂದ ಗಂಗೆಯ ತೀರ್ಥವು ಪ್ರವಾಹಿಸದಿದ್ದರೆ 'ರಾಮ'ನ ಶರೀರವು ಗಂಗಾಮಾತೆಯ ತರಂಗದ ಮೇಲೆ ಅವಶ್ಯವಾಗಿ ತೇಲಿ ಹೋಗುವದು "

ಈ ಪ್ರಕಾರ ತೀರ್ಥರಾಮರು ವೈರಾಗ್ಯದ ಪರಮಾವಧಿಯಲ್ಲಿ ಇದ್ದಾಗ ಅವರ ತಂದೆಯು ಅವರಿಗೆ ಮನೆಗೆ ಹೊರಟು ಬರಲಿಕ್ಕೆ ಭಕ್ತಧನ್ನಾರಾಮನ ಮುಖಾಂತರ ಒಂದು ಪತ್ರವನ್ನು ಕಳಿಸಿದನು. ಆ ಪತ್ರದಲ್ಲಿ ಭಕ್ತಧನ್ನಾರಾಮನಾದರೂ ತೀರ್ಥರಾಮರಿಗೆ--" ನೀನು ಈ ಆಜ್ಞೆಯನ್ನು ಮೀರಬೇಡ. ನಿನ್ನ ತಂದೆಯ ಅಪೇಕ್ಷೆಯ ಪ್ರಕಾರ ಮನೆಗೆ ಹೊರಟು ಬಾ " ಎಂದು ಔಪಚಾರಿಕ ರೀತಿಯಿಂದ ಬರೆದಿದ್ದರು. ಅದು ತೀರ್ಥರಾಮರಿಗೆ ಮುಟ್ಟಿದ ಕೂಡಲೆ ಅವರು ಅದನ್ನು ಓದಿಕೊಂಡು ಕೂಡಲೇ ಅದನ್ನು ಗಂಗಾನದಿಯಲ್ಲಿ ಚಲ್ಲಿಕೊಟ್ಟು ಅದಕ್ಕೆ ಒಂದು ಉತ್ತರವನ್ನು ಭಕ್ತ ಧನ್ನಾರಾಮನಿಗೆ ಕಳಿಸಿಕೊಟ್ಟರು. ಆ ಉತ್ತರವು ಬಹಳ ಮನೋವೇಧಕವಾದ್ದೂ ಬೋಧಪ್ರದವಾದ್ದೂ

ಇರುತ್ತದೆ. ಅದರ ಸಾರಾಂಶವೇನಂದರೆ:--“ಗುರುಗಳೇ, ನಿಮ್ಮ ಆಜ್ಞೆಯು ನ್ನು ನಾನೆಂದಾದರೂ ಮೀರುವೆನೇ? ನಾನು ನಿಮ್ಮ ಆಜ್ಞೆಯನ್ನೇ ಪಾಲಿಸುತ್ತಿದ್ದೇನೆ. ನಾನು ನಿಮ್ಮ ಆಜ್ಞಾನುಸಾರವಾಗಿಯೇ ನನ್ನ ಶರೀರವೆಂಬ ಪಂಜಾಬವನ್ನು ಅಂದರೆ ರಕ್ತಮಾಂಸಾದಿ ಐದು ನದಿಗಳ ಕೆಸರಿನಿಂದ ಆದ ಪಂಚಭೌತಿಕ ಶರೀರವನ್ನು ಬಿಟ್ಟು ಆತ್ಮಸ್ವರೂಪವೆಂಬ ಪರಮೇಶ್ವರನ ಮನೆಗೆ ಹೋಗುತ್ತಿದ್ದೇನೆ. ನನ್ನ ಮನೆಯ ಜನರಿಗೆ ಆತ್ಮ ಸ್ವರೂಪದಲ್ಲಿಯೇ ಬಂದು ನನ್ನನ್ನು ಕಾಣಿರೆಂದು ತಿಳಿಸಿರಿ. ಜನರು ತೀರ್ಥಗಳದ್ದಲ್ಲಿಗೆ ಬರುತ್ತಾರೆ. ತೀರ್ಥಗಳು ಜನರಿದ್ದಲ್ಲಿಗೆ ಬರುವದಿಲ್ಲ. ಆದುದರಿಂದ ನನ್ನ ಮನೆಯ ಜನರಿಗೆ ತೀರ್ಥಗಳಲ್ಲಿ ವಾಸಿಸತಕ್ಕಂಥ ಪರಮೇಶ್ವರನಾದ ತೀರ್ಥರಾಮನ ಚರಣಗಳಿಗೆ ಬಂದು ಎರಗಿದರೆ ನೀವು ಪ್ರಭುತೀರ್ಥರಾಮನನ್ನು ಕಾಣುವಿರೆಂದು ತಿಳಿಸಿರಿ. ನನ್ನ ಮನೆಯಲ್ಲಿ ಯಾವಲ್ಲಿಯತನಕ ಸನ್ಯಾಸ ಗಂಗೆಯು ಪ್ರವಹಿಸುವದಿಲ್ಲವೋ ಅಲ್ಲಿಯತನಕ ನಾನು ಅಲ್ಲಿ ಬಂದು ಇರಲಾರೆನು. ಅಲ್ಲಿ ನನ್ನ ಹೃದಯಕ್ಕೆ ಎಂದೆಂದಿಗೂ ಸಮಾಧಾನವಾಗಲಾರದು. ಮೃತರಾದ ಜನರಿಗೆ ತಿರುಗಿ ಬರುವದಕ್ಕೆ ಯಾರೂ ಎಂದೂ ಸಂದೇಶವನ್ನು ಕಳಿಸುವದಿಲ್ಲ. ಮೃತರನ್ನು ಕಾಣಲಿಕ್ಕೆ ಬಯಸುವವರು ತಾವೇ ಸಾಯಬೇಕು. ನಾನು ಮೃತನಾಗಿದ್ದೇನೆ. ನನ್ನ ದೇಹವು ಇನ್ನೂ ಇರುವಾಗಲೇ ನಾನು ಮೃತನಾಗಿದ್ದೇನೆ. ನನ್ನ ಜನರು ನನ್ನನ್ನು ತಿರುಗಿ ಕರೆಯಲಿಕ್ಕೆ ಪ್ರಯತ್ನಮಾಡಬಾರದು. ಅವರೂ ನನ್ನಂತೆ ಆದ ಬಳಿಕ ಅವರಿಗೆ ನನ್ನನ್ನು ಕಾಣುವದು ತೀರ ಸುಲಭವಿರುತ್ತದೆ.”

ನಾವು ಮೇಲೆ ಹೇಳಿದಂತೆ ತೀರ್ಥರಾಮರು ದೃಢನಿಶ್ಚಯದಿಂದ ಹಷೀಕೇಶಿಯ ಹತ್ತರದ ಬ್ರಹ್ಮಪುರಿಯ ತಪೋವನದಲ್ಲಿ ಆಸನವನ್ನು ಹಾಕಿಕೊಂಡು ಕುಳಿತ ಮೇಲೆ ಶಾ. ಶ. ೧೮೨೦ ನೇ ಭಾದ್ರಪದ ಪೌರ್ಣಿಮೆಯ ಒಂದೆರಡು ದಿವಸಗಳ ಮುಂಚೆ ತೀರ್ಥರಾಮರಿಗೆ ಪರಮೇಶ್ವರನ ಸಾಕ್ಷಾತ್ಕಾರವಾಯಿತು. ಆಗ ಅವರ ಆತ್ಮದ ಮೇಲೆ ಒಂದು ದಿವ್ಯ ಪ್ರಕಾಶವುಂಟಾಗಿ ಅವರ ವಾಸನಾರೂಪ ಹೃದಯ ಗ್ರಂಥಿಗಳೆಲ್ಲವು ಒಡೆದು ಛಿನ್ನಾವಿನ್ನವಾದವು. ಅವರ ಸಂಶಯಗಳು ನಾಶವಾದವು. ಅವರಿಗೆ ಹೊರಗೆ ಎಲ್ಲಿ ನೋಡಿದಲ್ಲಿ ಪ್ರತಿಯೊಂದು ಸಣ್ಣ ಪರಮಾಣುದಲ್ಲಿಯೂ ತತ್ವಮಸಿಯ ಗರ್ಜನೆಯು ಕೇಳಿಸಹತ್ತಿತು.

ಅವರು ತಮ್ಮ ದೃಷ್ಟಿಯನ್ನು ಅಂತರ್ಮುಖ ಮಾಡಿ ಆತ್ಮಾನುಸಂಧಾನ ಮಾಡಿದ್ದರಿಂದ **ಅಹಂ ಬ್ರಹ್ಮಾಸ್ಮಿ** (ನಾನೇ ಬ್ರಹ್ಮನು) ಎಂಬ ಜ್ಞಾನವು ಅವರಿಗೆ ಆಯಿತು. ಆಗ ಇಡೀ ಪೃಥ್ವಿಯು ಕಾಲುಚಂಡಿನಂತೆ (Football) ಅವರ ಕಾಲಿನ ಸ್ವಾಧೀನವಾಯಿತು. ಅಂದಬಳಿಕ ಅವರಿಗೆ ಆದ ಆತ್ಮಸ್ವರೂಪದ ನಿಜಾನಂದವನ್ನು ಯಾರು ವರ್ಣಿಸಲು ಶಕ್ತರು? ಅಮೃತದ ರುಚಿಯನ್ನು ಅಮೃತವನ್ನು ಸೇವಿಸಿದವರೇ ಹೇಳಬೇಕಲ್ಲದೆ ಅನ್ಯರಿಗೆ ಹೇಗೆ ಹೇಳಲಿಕ್ಕಾದೀತು? ಅದರಂತೆ ಆತ್ಮಾನುಭವಿಗಳ ನಿಜಾನಂದವನ್ನು ಆತ್ಮಾನುಭವಿಗಳೇ ವರ್ಣಿಸಬೇಕಲ್ಲದೆ ನಮ್ಮಂಥ ಬದ್ಧಜೀವರಿಗೆ ಅದನ್ನು ವರ್ಣಿಸವು ಅಧಿಕಾರವೇ ಇಲ್ಲ. ಆದರೆ ಸಾಕ್ಷಾತ್ಕಾರವಾದಂದಿನಿಂದ ಅವರ ಮೋರೆಯ ಮೇಲೆ ಒಂದು ಪ್ರಕಾರದ ದಿವ್ಯವಾದ ತೇಜಸ್ಸು ಉಂಟಾಗಿ ಒಂದು ಪ್ರಕಾರದ ಅಲೌಕಿಕ ಹಾಸ್ಯವು ಕುಣಿದಾಡುತ್ತಿತ್ತು. ಹಾಗೂ ಅವರ ಬಾಯಿಂದ ಬಂದ ಪ್ರತಿಯೊಂದು ವಾಕ್ಯವು, ಪ್ರತಿಯೊಂದು ಮಾತು, ಪ್ರತಿಯೊಂದು ಶಬ್ದವು ಧರ್ಮ ಮತ್ತು ತತ್ವಜ್ಞಾನಗಳ ವಿಷಯದಲ್ಲಿಯಾಗಲಿ, ರಾಜಕಾರಣ ಮತ್ತು ಸಮಾಜ ಶಾಸ್ತ್ರಗಳ ವಿಷಯದಲ್ಲಿಯಾಗಲಿ ಚತುರ್ಮುಖ ಬ್ರಹ್ಮನಿಂದ ಬಂದ ವೇದಗಳಂತೆ ಅಧಿಕಾರಯುಕ್ತವಾಗಿದ್ದವೆಂದು ನಾವು ಹೇಳದೆ ಇರಲಾರೆವು.

ತೀರ್ಥರಾಮರಿಗೆ ಮೇಲೆ ಹೇಳಿದಂತೆ ಸಾಕ್ಷಾತ್ಕಾರವಾದ ಬಳಿಕ ಅವರು ಜಗತ್ತಿನ ಸೇವೆಯನ್ನು ಮಾಡಿ ಜಗತ್ತಿನ ಉದ್ಧಾರಮಾಡುವದಕ್ಕಾಗಿ ತಮ್ಮ ತಪೋವನದಿಂದ ಹೊರಟು ಒಂದು ಶಕೆ ೧೮೨೧ ರಲ್ಲಿ ಅಂದರೆ ಇಸವಿ ಸನ್ನ ೧೮೯೯ ರಲ್ಲಿ ಅಮರನಾಥನ ಯಾತ್ರೆಯನ್ನು ಮಾಡಲಿಕ್ಕೆ ಹೋದರು. ಅವರು ಈ ಯಾತ್ರೆಯನ್ನು ತಮ್ಮ ಮೈಮೇಲೆ ಒಂದೇ ಅರಿವೆಯನ್ನು ಹಾಕಿಕೊಂಡು ಮಾಡಿದರು. ಪರಮಾವಧಿ ಚಳಿಯು ಇರುವಂಥ ಅಮರನಾಥನ ದೇವಾಲಯದಲ್ಲಿ ಅವರು ಕೆಲವು ತಾಸುಗಳನ್ನು ನಗ್ನಾವಸ್ಥೆಯಲ್ಲಿಯೇ ಕಳೆದರು! ಎಷ್ಟು ಅವರ ಸಾಮರ್ಥ್ಯವು! ಈ ಯಾತ್ರೆಯನ್ನು ಅವರು ಮಾಡಿದ ಬಳಿಕ ಅವರ ಅಂತಃಕರಣವೆಲ್ಲ ಶಾಂತಿಮಯವಾಗಿ ಹೋಗಿ ಅವರು ಆತ್ಮಾನಂದದಲ್ಲಿ ತರಂಗಿಸಹತ್ತಿದರು.

ಮುಂದೆ ಕೆಲವು ದಿವಸಗಳ ತರುವಾಯ ಅವರು ಬೇನೆಯಿಂದ ಮಲಗಿಕೊಂಡರು. ಈ ಬೇನೆಯಲ್ಲಿ ಅವರಿಗೆ ಎರಡು ಮೂರು ಸಾರೆ ಭಯಂಕರ

ವಾದ ಮೂರ್ಛೆಯು ಸಹ ಬಂದಿತು. ಅವರ ಶಿಷ್ಯರಾದ ನಾರಾಯಣಸ್ವಾಮಿಗಳು ಹಗಲಿರಳು ಅವರ ಸೇವೆಯನ್ನು ಮಾಡಿದರು. ಒಂದು ದಿವಸ ಅವರಿಗೆ ರಾತ್ರಿ ೨ ಘಂಟೆಯಾದರೂ ನಿದ್ರೆಯು ಬರಲಿಲ್ಲ. ಮುಂದೆ ಅವರಿಗೆ ಸ್ವಲ್ಪ ನಿದ್ರೆಯು ಬಂದು ಸ್ವಲ್ಪ ಗುಣವು ತೋರಿದ ಬಳಿಕ ಅವರು ನಾರಾಯಣಸ್ವಾಮಿಗೆ--“ ಮಗೂ! ರಾಮನ ಶರೀರಕ್ಕೆ ಸ್ವಲ್ಪ ಗುಣವು ತೋರಹತ್ತಿರುವದು. ಆದುದರಿಂದ ಭಾರತ ದಿವಸಕ್ಕೆ ಒಳ್ಳೇ ದಿವಸಗಳು ಬರುವ ಲಕ್ಷಣವು ಕಾಣುತ್ತದೆ” ಎಂದು ನುಡಿದರು. ಈ ಅವರ ಉದ್ಗಾರದ ಮೇಲಿಂದ ಅವರು ಸ್ವಂತ ದೇಹದ ಮತ್ತು ಸಂಸಾರದ ಬಗ್ಗೆ ಏನೂ ಚಿಂತೆ ಮಾಡದೆ ಭಾರತವರ್ಷದ ಮತ್ತು ರಾಷ್ಟ್ರೀಯ ಪ್ರಪಂಚದ ಬಗ್ಗೆ ಚಿಂತೆ ಮಾಡುತ್ತಿದ್ದರೆಂಬುವದು ಸಹಜವಾಗಿ ಕಾಣುತ್ತದೆ. ಸಂಯುಕ್ತ ಪ್ರಾಂತದ ಡಿಸ್ಟ್ರಿಕ್ಟ ಜಡ್ಜರೂ, ತೀರ್ಥರಾಮರ ಶಿಷ್ಯಪಂಥದಲ್ಲಿಯ ಒಬ್ಬ ಸದ್ಗೃಹಸ್ಥರೂ ಆದ ರಾಯಬಹಾದ್ದೂರ ಲಾಲಾ ಬೈಜನಾಥ ಬಿ. ಎ. ಇವರು ರಚಿಸಿದ ‘ ಪ್ರಾಚೀನ ಮತ್ತು ಅರ್ವಾಚೀನ ಹಿಂದೂಧರ್ಮ ’ ಎಂಬ ಒಂದು ಇಂಗ್ಲಿಷ್ ಪುಸ್ತಕದ ಪ್ರಸ್ತಾವನೆಯನ್ನು ತೀರ್ಥರಾಮರು ಬರೆದಿರುತ್ತಿದ್ದು ಅದರಲ್ಲಿ ಅವರು ಹೀಗೆ ಉದ್ಗಾರಗಳನ್ನು ತೆಗೆದಿರುತ್ತಾರೆ:--**“ ನಿಮಗೆ ಸ್ವದೇಶಭಕ್ತರಾಗುವ ಮನಸ್ಸುಂಟೋ? ಹಾಗಿದ್ದರೆ ನೀವು ನಿಮ್ಮ ರಾಷ್ಟ್ರದ ಮೇಲೂ ರಾಷ್ಟ್ರದೊಳಗಿನ ಜನತೆಯ ಮೇಲೂ ಪ್ರೇಮಮಾಡಿ ಅವರಲ್ಲಿ ಏಕಜೀವವಾಗಿರಿ. ರಾಷ್ಟ್ರದೊಳಗಿನ ಜನತೆಯ ಮೇಲೆ ಯತ್ಕಿಂಚಿತ್ತಾದರೂ ಅಹಂಕಾರವನ್ನು ತೋರಿಸಬೇಡಿರಿ. ನಿಮ್ಮ ಮಾತೃ ಭೂಮಿಯ ಹಿತಕ್ಕೋಸ್ಕರ ನಿಮ್ಮ ಜೀವಿತವನ್ನು ಅರ್ಪಣ ಮಾಡುವ ನಿಜವಾದ ಆಧ್ಯಾತ್ಮಿಕ ಸಿಪಾಯರಾಗಿರಿ. ನಿಮ್ಮ ದೇಹದೊಳಗಿನ ಅಹಂಕಾರವನ್ನು ತೆಗೆದುಹಾಕಿರಿ ಮತ್ತು ನೀವೇ ನಿಮ್ಮ ರಾಷ್ಟ್ರವಾಗಿರಿ. ಅಂದರೆ ನಿಮ್ಮ ಭಾವನೆಗಳೇ ರಾಷ್ಟ್ರದ ಭಾವನೆಗಳಾಗುವವು ಈ ರೀತಿಯಿಂದ ನೀವು ನಿಮ್ಮ ಹೆಜ್ಜೆಯನ್ನು ಮುಂದೆ ಇಡಲಿಕ್ಕೆ ಹತ್ತಿದರೆ ರಾಷ್ಟ್ರವು ನಿಮ್ಮ ಬೆನ್ನುಹತ್ತಿ ನಿಶ್ಚಯದಿಂದ ಬರುವದೆಂದು ತಿಳಿಯಿರಿ. ನೀವು ಆರೋಗ್ಯದ ಭಾವನೆಯನ್ನು ಮಾಡಿದರೆ ನಿಮ್ಮ**

ರಾಷ್ಟ್ರದ ಯಾವತ್ತು ಜನರು ಆರೋಗ್ಯ ಸಂಪನ್ನರಾಗದೆ ಇರಲಾರರು. ನಿಮ್ಮ ಸಾಮರ್ಥ್ಯವು ಮತ್ತು ನಿಮ್ಮ ಶಕ್ತಿಯು ಯಾವತ್ತು ಜನರ ರಕ್ತದ ನಾಡಿಗಳಲ್ಲಿ ಹರಿಯದೆ ಇರಲಾರವು. ನಾನು ಅಖಿಲ ಭರತಖಂಡವಿದ್ದೇನೆ. ಭರತ ಭೂಮಿಯು ನನ್ನ ಶರೀರವಿರುತ್ತದೆ. ಕನ್ಯಾಕುಮಾರಿಯು ನನ್ನ ಕಾಲು ಮತ್ತು ಹಿಮಾಲಯವು ನನ್ನ ತಲೆಯು ಇರುತ್ತವೆ. ನನ್ನ ಕೂದಲುಗಳಿಂದ ಭಾಗೀರಥಿಯು ಹರಿಯುತ್ತದೆ. ನನ್ನ ಮಸ್ತಕದಿಂದ ಬ್ರಹ್ಮಪುತ್ರ ಮತ್ತು ಸಿಂಧೂ ನದಿಗಳ ಉಗಮವಾಗಿರುತ್ತದೆ. ವಿಂಧ್ಯಾಚಲವು ನನ್ನ ನಡಪಟ್ಟಿಯು ಇರುತ್ತದೆ ಆದುದರಿಂದ ನಾನು ಇಡೀ ಭರತಖಂಡವೇ ಆಗಿದ್ದು ಅದರ ಪೂರ್ವ ಪಶ್ಚಿಮ ಮಗ್ಗಲುಗಳು ನನ್ನ ಕೈಗಳು ಇರುತ್ತವೆ. ಹಾಗೂ ಇಡೀ ಮಾನವೀ ಜಾತಿಯನ್ನು ಆಲಿಂಗನ ಮಾಡುವದಕ್ಕಾಗಿ ನಾನು ಅವುಗಳನ್ನು ಮುಂದೆ ಮಾಡಿರುತ್ತೇನೆ. ಈ ಪ್ರಕಾರ ನನ್ನ ಶರೀರದ ಸ್ಥಿತಿಯು ಇದ್ದು ನನ್ನ ಪ್ರೇಮವು ಮಾತ್ರ ವಿಶ್ವವ್ಯಾಪಿಯಾಗಿರುವದು. ಆಕಾಶದ ತುಂಬೆಲ್ಲ ನನ್ನ ದೃಷ್ಟಿಯು ಇರುವದು. ಎಲ್ಲರ ಆತ್ಮವು ನನ್ನ ಅಂತರಾತ್ಮವಿರುತ್ತದೆ. ನಾನು ನಡೆಯಲಿಕ್ಕೆ ಹತ್ತಿದಾಗ್ಗೆ ಇಡೀ ಭರತಖಂಡವೇ ನಡೆಯುತ್ತದೆಂದು ನನಗೆ ತೋರುತ್ತದೆ. ನನ್ನ ಕ್ರಿಯೆಗಳೇ ಇಡೀ ಭರತಖಂಡದ ಕ್ರಿಯೆಗಳೆಂದು ನನಗೆ ಅನ್ನಿಸುತ್ತದೆ. ನಾನು ಭರತಖಂಡವಿದ್ದೇನೆ. ನಾನು ಶಂಕರನು, ಶಿವನು ಇದ್ದೇನೆ. ಸ್ವದೇಶ ಭಕ್ತಿಯ ಅತ್ಯುಚ್ಚ ಧ್ಯೇಯವು ಇದೇ ಇರುತ್ತದೆ. ಹಾಗೂ ಇದಕ್ಕೆ ಪ್ರವೃತ್ತಿಪರವಾದ ವೇದಾಂತವೆಂದು ಅನ್ನುತ್ತಾರೆ. ಇದರ ರಹಸ್ಯವು ಈಗ ನನಗೆ ತಿಳಿಯಲಿಕ್ಕೆ ಹತ್ತಿರುವದರಿಂದ ನಾನೆಷ್ಟು ಧನ್ಯನು!" (೬ ನೇ ಮಾರ್ಚ ೧೮೯೯)

ಈ ಮೇಲಿನ ಉದ್ಗಾರಗಳ ಮೇಲಿಂದ ತೀರ್ಥರಾಮರ ರಾಷ್ಟ್ರಭಕ್ತಿಯು ಎಷ್ಟು ಉಜ್ವಲವಾದದ್ದೆಂಬುವದು ತಾನೇ ಒಡೆದು ಕಾಣುವದು. ಇನ್ನೊಂದು ಮಹತ್ವದ ಉದಾಹರಣೆಯೇನಂದರೆ:--ತೀರ್ಥರಾಮರು ಜಪಾನ ಮತ್ತು

ಅಮೇರಿಕಾ ದೇಶಗಳ ಪ್ರವಾಸವನ್ನು ಮುಗಿಸಿಕೊಂಡು ಸನ್ನ ೧೯೦೫ ನೇ ಇಸ್ವಿಯಲ್ಲಿ ವಸಿಷ್ಠಾಶ್ರಮದಲ್ಲಿರುತ್ತಿದ್ದಾಗ ಅವರಿಗೆ ಒಂದು ಪತ್ರವು ಬಂದು ತಲುಪಿತು. ಅದರಲ್ಲಿ--"ನೀವು ಬ್ರಿಟಿಶ ಸರಕಾರವನ್ನು ಬುಡಮೇಲು ಮಾಡುವ ಅಪೇಕ್ಷೆಯುಳ್ಳಂಥ ಒಬ್ಬ ರಾಷ್ಟ್ರೀಯ ಗೃಹಸ್ಥರು ಇರುತ್ತೀರೆಂಬ ಸಂಶಯದಿಂದ ಪೋಲಿಸರು ನಿಮ್ಮ ಬೆನ್ನುಹತ್ತಿರುತ್ತಾರೆ" ಎಂಬ ಸಾರಾಂಶದ ಸಂಗತಿಯು ಬರೆಯಲ್ಪಟ್ಟಿತ್ತು. ಆ ಪತ್ರವನ್ನು ಅವರು ಓದಿ ತಮ್ಮ ಹತ್ತರ ಕುಳಿತಿದ್ದ ಜನರ ಮುಂದೆ –"ಪೋಲಿಸರು ನನ್ನನ್ನು ತಮ್ಮ ಮನಸ್ಸಿಗೆ ಬಂದಂತೆ ತಿಳಿದುಕೊಳ್ಳಲಿ. ನಾನು ಏನು ಇರುವದು ಇದ್ದೇನೆ. ನನ್ನ ನಿಜಸ್ಥಿತಿಯನ್ನು ನಾನು ಎಂದೂ ಬಚ್ಚಿಡುವದಿಲ್ಲ. ನಾನು ಹಿಂದವಾಸಿಯಾಗಿರುವದರಿಂದ ನನ್ನ ಹಿಂದುಸ್ಥಾನವು ಸ್ವತಂತ್ರವಾಗಬೇಕೆಂದು ನನ್ನ ಅಪೇಕ್ಷೆಯದೆ. ಅದು ಒಂದಿಲ್ಲೊಂದು ದಿವಸ ಸ್ವತಂತ್ರವಾಗುವದು ನಿಜವು. ಅದಕ್ಕೆ ಈ ರಾಮನು ಸ್ವತಂತ್ರತೆಯನ್ನು ದೊರಕಿಸಿಕೊಡುತ್ತಾನೋ ಅಥವಾ ಇತರ ಸಾವಿರ ಮಂದಿ ರಾಮರು ದೊರಕಿಸಿಕೊಡುತ್ತಾರೋ ಯಾರಿಗೂ ತಿಳಿಯದು" ಎಂದು ಹೇಳಿದರು.

ತೀರ್ಥರಾಮರು ತಮ್ಮ ಬೇಸೆಯಿಂದ ನೆಟ್ಟಗಾದ ಬಳಿಕ ಪಾರಮಾರ್ಥಿಕ ವಿಷಯವನ್ನು ಕುರಿತು ತಮ್ಮ ವಿಚಾರಗಳನ್ನು ಜನತೆಯ ಮುಂದೆ ಇಡುವದಕ್ಕಾಗಿ **ಅಲಿಫ್ (ಅಲ್ಲಾ, ಪರಮೇಶ್ವರ)** ಎಂಬ ಹೆಸರಿನ ಒಂದು ಮಾಸಪತ್ರಿಕೆಯನ್ನು ಹೊರಡಿಸಬೇಕೆಂದು ನಿಶ್ಚಯಿಸಿ 'ಆನಂದ ಮುದ್ರಣಾಲಯ' ವೆಂಬ ಮುದ್ರಣಾಲಯವನ್ನು ತೆರೆದರು. ಈ ಮಾಸಪತ್ರಿಕೆಯನ್ನು ಹೊರಡಿಸುವದಕ್ಕೆ ಬೇಕಾದ ದ್ರವ್ಯ ಸಹಾಯವನ್ನು ಲಾಲಾಹರಲಾಲ ಎಂಬ ಅವರ ಒಬ್ಬ ಭಕ್ತರು ಮಾಡಿದರು. ಈ ಮಾಸಪತ್ರಿಕೆಯ ಎಲ್ಲ ಬರಹಗಳನ್ನು ಸ್ವಾಮಿ ತೀರ್ಥರಾಮರೇ ಬರೆಯುತ್ತಿದ್ದರು. ಇದರ ೧ ನೇ ಸಂಚಿಕೆಯು ಶಕೆ ೧೮೨೧ ನೇ ಪೌಷ್ಯದಲ್ಲಿ ಹೊರಟಿತು. ತೀರ್ಥರಾಮರು ಈ ಮಾಸಪತ್ರಿಕೆಯನ್ನು ಹೊರಡಿಸುವ ಕಾಲಕ್ಕೆ ಇನ್ನೂ ಲಾಹೋರದ ಓರಿಯಂಟಲ್ ಕಾಲೇಜದಲ್ಲಿ ಎರಡೆರಡು ತಾಸು ಕಲಿಸುತ್ತಿದ್ದರು. ಅದರೆ ಅವರು ಮಾಸಪತ್ರಿಕೆಯಲ್ಲಿ ಲೇಖಗಳನ್ನು ಬರೆಯುವ ವ್ಯವಸಾಯದಲ್ಲಿ ತೊಡಗಿಕೊಂಡ

ಕಾರಣ ಅದರ ಮೂರು ಸಂಚಿಕೆಗಳು ಹೊರಡುವದರೊಳಗಾಗಿ ತಮ್ಮ ಶಿಕ್ಷಕ ಕೆಲಸವನ್ನು ಬಿಟ್ಟುಕೊಟ್ಟು ತಪೋವನಕ್ಕೆ ಹೊರಟು ಹೋದರು. ನಾರಾಯಣಸ್ವಾಮಿಗಳೆಂಬ ಶಿಷ್ಯರು ತಾವೂ ತಮ್ಮ ಎರಡನೇ ಕೆಲಸವನ್ನು ಬಿಟ್ಟುಕೊಟ್ಟು ಆನಂದ ಮುದ್ರಣಾಲಯದ ಯಾವತ್ತು ವ್ಯವಸ್ಥೆಯನ್ನು ಮಾಡುವದಕ್ಕೆ ಬಂದು ನಿಂತಿದ್ದರು. ಅವರು ಸಹ ತೀರ್ಥರಾಮರ ಲೇಖಗಳ ಪ್ರತಿಯನ್ನು ತೆಗೆಯುವದಕ್ಕೂ, ಅವರ ಸತ್ಸಮಾಗಮದ ಲಾಭವನ್ನು ತೆಗೆದುಕೊಳ್ಳುವದಕ್ಕೂ ಅವರ ಸಂಗಡ ತಪೋವನಕ್ಕೆ ಹೊರಟು ಹೋದರು.

ತೀರ್ಥರಾಮರು ತಮ್ಮ ಮತ್ತು ತಮ್ಮ ಕುಟುಂಬದ ಹೊಟ್ಟೆಯ ಸಂರಕ್ಷಣ ಮಾಡುವದನ್ನು ಸಹ ಲಕ್ಷಿಸದೆ ಕಾಲೇಜದಲ್ಲಿಯ ತಮ್ಮ ಶಿಕ್ಷಕ ಕೆಲಸವನ್ನು ಬಿಟ್ಟುಕೊಡುವದನ್ನು ಕೇಳಿ ಎಷ್ಟೋ ಮಂದಿ ಅವರ ವಿದ್ಯಾರ್ಥಿಗಳಿಗೂ ಅವರ ಮೇಲೆ ಪ್ರೇಮ ಮಾಡುವ ಜನರಿಗೂ ವಿಷಾದವೆನಿಸಿತು. ಆದುದರಿಂದ ಅವರಲ್ಲಿ ಒಬ್ಬ ಗೃಹಸ್ಥನು ಅವರ ಬಳಿಗೆ ಬಂದು ಅವರ ಕೂಡ ಈ ಕೆಳಗೆ ಬರೆದ ಪ್ರಕಾರ ಸಂಭಾಷಣ ಮಾಡಿದನು.

**ಒಬ್ಬ ಗೃಹಸ್ಥ**—ನೀವು ನಿಮ್ಮ ಶಿಕ್ಷಕ ಕೆಲಸವನ್ನು ಏಕೆ ಬಿಟ್ಟುಕೊಡುತ್ತೀರಿ? ನೀವು ಅದನ್ನು ಬಿಟ್ಟುಕೊಟ್ಟ ಬಳಿಕ ನಿಮ್ಮ ಚರಿತಾರ್ಥವು ಹೇಗೆ ನಡೆಯುವದು? **ಶರೀರ ರಕ್ಷಿತೋ ಧರ್ಮಃ** ಎಂದು ಶಾಸ್ತ್ರ ವಚನವಿರುವದರಿಂದ ನೀವು ನಿಮ್ಮ ಕುಟುಂಬ ರಕ್ಷಣ ಮಾಡುವ ಬಗ್ಗೆ ಯೋಗ್ಯ ವ್ಯವಸ್ಥೆ ಮಾಡುವದು ನಿಮ್ಮ ಕರ್ತವ್ಯವಿರುತ್ತದೆ. ಭಗವೀ ವಸ್ತ್ರಗಳನ್ನು ಹಾಕುವದರಿಂದ ಮತ್ತು ಒಬ್ಬರ ಬಾಗಿಲದಿಂದ ಇನ್ನೊಬ್ಬರ ಬಾಗಿಲಿಗೆ ಭಕ್ಕರಿಯ ತುಣಕುಗಳನ್ನು ಭಿಕ್ಷೆ ಬೇಡಲಿಕ್ಕೆ ಹೋಗುವದರಿಂದ ದೇವರು ದರ್ಶನವನ್ನು ಕೊಡುವದಿಲ್ಲ. ಗೃಹಸ್ಥಾಶ್ರಮವನ್ನು ಯಥಾ ಯೋಗ್ಯ ರೀತಿಯಿಂದ ಪಾಲನ ಮಾಡುವದರಿಂದ ಯಾವತ್ತು ಸಾಧ್ಯವಾಗುವದು. ಇದಲ್ಲದೆ ಗೃಹಸ್ಥನು ಸನ್ಯಾಸಿಯಾಗುವದರಿಂದ ಪಾಪವು ತಟ್ಟುವದು.

**ರಾಮ**—ಎರಡನೆಯವರ ಸೇವೆಯನ್ನು ಮಾಡುವದು ಸೇವಕರ ಕೆಲಸವಿರುತ್ತದೆ. ನಾನು ಪ್ರತ್ಯಕ್ಷ ಬಾದಶಹನಿರುತ್ತೇನೆ. ನಾನು ಸೇವಕನಿರುವದಿಲ್ಲ.

ಹಾಗೂ ನನಗೆ ಯಾರೂ ಒಡೆಯರಿರುವದಿಲ್ಲ. ರಾಜರೂ ಮಹಾರಾಜರೂ ನನ್ನ ಮುಂದೆ ಕೈಜೋಡಿಸಿಕೊಂಡು ನಿಂತಿರುವರು. ನಾನು ಅಂದರೆ ಈ ದೇಹ ವಲ್ಲ. ನಾನು ದೇಹ ಪ್ರಾಣಗಳಿಂದ ಬೇರೆ ಇರುತ್ತೇನೆ. ನನಗೆ ದೇಹವೆಂದು ತಿಳಿಯುವದು ತಪ್ಪು ಇರುತ್ತದೆ. ನಾನು ಆತ್ಮನು ಇರುತ್ತೇನೆ. ಅಖಿಲ ವಿಶ್ವದ ಆತ್ಮನು ಇರುತ್ತೇನೆ. ಪಂಚತತ್ವಗಳು ನನ್ನ ಸೇವೆಯನ್ನು ಮಾಡುತ್ತವೆ. ಅವುಗಳಲ್ಲೆಲ್ಲ ನಾನೇ ತುಂಬಿರುತ್ತೇನೆ. ನಾನಿಲ್ಲದಂಥ ಪದಾರ್ಥವು ಒಂದೂ ಇಲ್ಲ. ನಾನು ನನ್ನ ಕಡೆಗೆ ದೇಹಾತ್ಮಬುದ್ಧಿಯಿಂದ ನೋಡುವತನಕ ಈ ದೇಹವು ಸೇವೆಯನ್ನು ಮಾಡುತ್ತಿತ್ತು. ಈಗ ರಾಮನು ದೇಹದ ಕಡೆಗೆ ಸತ್ಸ್ವರೂಪ ದೃಷ್ಟಿಯಿಂದ ನೋಡುವದರಿಂದ ಅದು ಎಲ್ಲ ಕಡೆಗೆ ಅವನನ್ನೇ ನೋಡುತ್ತದೆ. ನೀವು ನನಗೆ ನನ್ನ ಶಿಕ್ಷಕ ಕೆಲಸವನ್ನು ಏಕೆ ಬಿಡುತ್ತೀರೆಂದು ಕೇಳುತ್ತೀರಿ. ಶರೀರ, ಮನಸ್ಸು, ಅಂತಃಕರಣ ಮತ್ತು ಪ್ರಾಣ ಇವುಗಳೆಲ್ಲ ತಮ್ಮೊಳಗೆ ಈಗ ಒಡಂಬಡಿಕೆಯನ್ನು ಮಾಡಿಕೊಂಡಿರುತ್ತವೆ. ರಾಮನೇ ಅವು ಗಳ ಒಡೆಯನು. ಆತ್ಮನು ಸೂರ್ಯನಿರುತ್ತಾನೆ. ಇಂದ್ರಿಯಗಳ ಇಂದ್ರಿಯ ತ್ವವು ಹೊರಟು ಹೋಗಿ ಈಗ ಯಾವತ್ತು ರೋಮರಂಧ್ರಗಳಿಂದ ಅಮೃತವು ಹರಿಯಲಿಕ್ಕೆ ಹತ್ತಿರುತ್ತದೆ. ಆಕಾಶವು ನನಗೆ ವಂದಿಸುತ್ತದೆ. ಸೂರ್ಯ, ಚಂದ್ರ, ಶುಕ್ರ ಇವರಲ್ಲಿ ರಾಮನದೇ ತೇಜಸ್ಸು ಇರುತ್ತದೆ. ಆದುದರಿಂದ ಪ್ರಿಯ ಮಗೂ! ದೇಹಾತ್ಮಭಾವವನ್ನು ರಾಮಸ್ವರೂಪದಲ್ಲಿ ತಲ್ಲೀನಮಾಡು. ಹೊಟ್ಟೆಯ ಸಲುವಾಗಿ ಲಕ್ಷ್ಯಕೊಡಬಾರದೆಂದು ನಾನು ಅನ್ನುವದಿಲ್ಲ. ನಾನು ಯಾರು ಎಂಬುವದರ ಕಡೆಗೆ ಲಕ್ಷ್ಯಕೊಡುವದು ಸತ್ಕಾರ್ಯವಿರುತ್ತದೆ. ಉಳಿದ ಯಾವತ್ತು ಕಾರ್ಯಗಳು ಅಸತ್ಯವಿರುತ್ತವೆ. ಹೊಟ್ಟೆಯ ಸಲುವಾಗಿ ಕೆಲಸ ಮಾಡುತ್ತಿರುವಾಗ್ಗೆ ನೀನು ಅದರ ಮೋಹದಲ್ಲಿಯೇ ಕೂಡ್ರಬೇಡ. ಸದ್ವ ಸ್ತುವನ್ನು ಹುಡುಕಿಕೋ. ಅಂದರೆ ಯಾವತ್ತು ದೇವತೆಗಳು ತಾವಾಗಿ ನಿನ್ನ ಹೊಟ್ಟೆಯ ಸೇವೆಯನ್ನು ಮಾಡುವರು. ಆದುದರಿಂದ ನೀನು ರಾಮನಲ್ಲಿ ದೃಢ ವಿಶ್ವಾಸವಿಡು. ಅಂದರೆ ಅವನು ನಿನಗೆ ಶಾಂತಿಯನ್ನೂ ಆನಂದವನ್ನೂ ಕೊಡುವನು.

# ವಾನಪ್ರಸ್ಥಾಶ್ರಮ.

ತೀರ್ಥರಾಮರು ಗೃಹಸ್ಥಾಶ್ರಮದಲ್ಲಿರುವಾಗಲೇ ಅವರ ಭಕ್ತಿ ವೈರಾಗ್ಯಗಳು ಅದ್ವಿತೀಯವಾಗಿದ್ದವು. ಅವರಿಗೆ ನಿಜವಾಗಿ ವಾನಪ್ರಸ್ಥಾಶ್ರಮದ ಆಗತ್ಯವೇ ಇದ್ದಿಲ್ಲ. ಜಗದುದ್ಧಾರಕ ಮಹಾತ್ಮರು ಜಡ ಮೂಢ ಜೀವಗಳನ್ನು ಉದ್ಧಾರ ಮಾಡುವದಕ್ಕಾಗಿ ಕಾಲಾಂತರದಿಂದ ಈ ಕರ್ಮ ಭೂಮಿಯಲ್ಲಿ ಅವತರಿಸಿದಾಗ್ಗೆ ಅವರಿಗೆ ಧರ್ಮದಲ್ಲಿಯ ಸನಾತನ ತತ್ವವನ್ನು ಜನರಿಗೆ ಮನವರಿಕೆ ಮಾಡಿಕೊಡುವದಕ್ಕಾಗಿ ಆಚಾರಶುದ್ಧರಾಗಿಯೇ ಇರಬೇಕಾಗುತ್ತದೆ. ಆದುದರಿಂದ ತೀರ್ಥರಾಮರು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತಮ್ಮ ಹೆಂಡತಿಯನ್ನೂ, ಮದನಮೋಹನ ಮತ್ತು ಬ್ರಹ್ಮಾನಂದ ಎಂಬ ಇಬ್ಬರು ಗಂಡು ಮಕ್ಕಳನ್ನೂ, ಒಬ್ಬ ಹೆಣ್ಣು ಮಗಳನ್ನೂ, ತಮ್ಮ ಶಿಷ್ಯನಾದ ನಾರಾಯಣಸ್ವಾಮಿಯನ್ನೂ ಕೂಡಿಕೊಂಡು ಲಾಹೋರದಿಂದ ಹೊರಟರು. ಆ ಕಾಲಕ್ಕೆ ಅವರ ಅನೇಕ ಮಂದಿ ಭಕ್ತರು ಅವರನ್ನು ಕಳಿಸಲಿಕ್ಕೆ ಲಾಹೋರ ಸ್ಟೇಶನ್ನಕ್ಕೆ ಬಂದಿದ್ದರು. ಅಲ್ಲಿ ತೀರ್ಥರಾಮರು ಸ್ವತಃ ರಚಿಸಿದ ವೈರಾಗ್ಯದ ಉರ್ದೂ ಪದ್ಯವನ್ನು ಅವರ ಶಿಷ್ಯರಾದ ನಾರಾಯಣಸ್ವಾಮಿಗಳೂ ಅವರ ಭಕ್ತರೂ ಸುಮಾರು ಅರ್ಧ ತಾಸಿನ ವರೆಗೆ ಲಾಹೋರ ಸ್ಟೇಶನ್ನದ ಪ್ಲ್ಯಾಟಫಾರ್ಮಿನ ಮೇಲೆ ಹಾಡಿದರು. ಆದರಲ್ಲಿ ಕೆಳಗೆ ಬರೆದ ಸಾರಾಂಶವಿತ್ತು :—

**ಗಣಿತವಿದ್ಯೆಯೇ, ನಿನಗೆ ಕೊನೆಯ ವಂದನೆ!**
**ರಾವಿನದಿಯೇ, ನಿನಗೆ ಕೊನೆಯ ವಂದನೆ!**
**ನನ್ನ ಹೆಂಡತಿಯೇ, ನಿನಗೆ ಕೊನೆಯ ಆಶೀರ್ವಾದ!**
**ನನ್ನ ಮಕ್ಕಳೇ, ನಿಮಗೆ ಕೊನೆಯ ಆಶೀರ್ವಾದ!**
**ನನ್ನ ಶತ್ರು ಮಿತ್ರರೇ, ನಿಮಗೆ ಕೊನೆಯ ವಂದನೆ!**
**ನನ್ನ ಪುಸ್ತಕ ಮತ್ತು ಪಾಠಶಾಲೆಗಳೇ, ನಿಮಗೆ ಕೊನೆಯ ವಂದನೆ!**
**ನನ್ನ ಹೃದಯವೇ, ನಿನಗೆ ನನ್ನ ಕೊನೆಯ ವಂದನೆ!**
**ನನ್ನ ದೇವರೇ, ನಿನಗೆ ಕೊನೆಯ ವಂದನೆ!**

ಈ ಪ್ರಕಾರ ಇವರೆಲ್ಲರು ಹಾಡಿದ ಬಳಿಕ ತೀರ್ಥರಾಮರು ಇವರೆಲ್ಲರ ನಿರೂಪವನ್ನು ತೆಗೆದುಕೊಂಡು ಉಗಿಬಂಡಿಯಲ್ಲಿ ಕುಳಿತಾಗ ಎಲ್ಲರ ಕಣ್ಣೊಳಗೆ ಪ್ರೇಮಾಶ್ರುಗಳು ಉದುರಿದವು. ಮುಂದೆ ಅವರನ್ನು ಕಳಿಸಲಿಕ್ಕೆ ಬಂದ ಭಕ್ತರೆಲ್ಲರು ಹೊರಟು ಹೋದ ಬಳಿಕ ತೀರ್ಥರಾಮರು ಮತ್ತು ಅವರ ಪರಿವಾರದವರು ಹರಿದ್ವಾರಕ್ಕೆ ಹೋಗಿ ಅಲ್ಲಿಂದ ತೆಹರಿಗೆ ಹೋದರು. ಅಲ್ಲಿಂಧ ಅವರು ಗಂಗಾ ತಟಾಕದಲ್ಲಿಯ ಶೇಟ ಮುರಲೀಧರ ಇವರ ಒಂದು ಸುಂದರವಾದ ಉದ್ಯಾನವನದಲ್ಲಿ ಏಳು ಅಥವಾ ಎಂಟು ತಿಂಗಳುಗಳವರೆಗೆ ಇದ್ದರು. ಈ ಪ್ರಕಾರ ಎಲ್ಲರು ಆ ತಪೋವನಕ್ಕೆ ಹೋಗಿ ತಲುಪಿದ ಬಳಿಕ ತೀರ್ಥರಾಮರು ಅವರಿಗೆ--"ನಿಮ್ಮ ಹತ್ತರ ಇದ್ದ ಯಾವತ್ತು ವಸ್ತುಒಡಿವೆಗಳನ್ನು ಮತ್ತು ದ್ರವ್ಯವನ್ನು ಗಂಗಾರ್ಪಣ ಮಾಡಿ ಪರಮೇಶ್ವರನ ಧ್ಯಾನ ಮಾಡುತ್ತ ಕುಳಿತುಕೊಳ್ಳಿರಿ. ಯಾರೂ ತಿಂಬುಂಬುವ ಪದಾರ್ಥಗಳ ಬಗ್ಗೆ ಅಸ್ವಮಾಧಾನವನ್ನು ಪಡಬೇಡಿರಿ" ಎಂದು ಅಪ್ಪಣೆಯನ್ನು ಮಾಡಿದರು. ತೀರ್ಥರಾಮರ ಸಂಗಡ ಇದ್ದ ಜನರ ಮನಸ್ಸು ತೀರ್ಥರಾಮರಂತೆ ಒಮ್ಮಿಲೆ ಆಗುವದು ಅಶಕ್ಯವಿತ್ತು. ಆದುದರಿಂದ ಅವರಿಗೆ ಇದರಿಂದ ಮೊದಲಿಗೆ ಬಹಳ ಕಷ್ಟವಾಯಿತು. ಆದರೂ ಅವರಿಗೆ ತೀರ್ಥರಾಮರ ಅಪ್ಪಣೆಯ ಪ್ರಕಾರ ನಡೆಯದೆ ನಿರ್ವಾಹವಿದ್ದಿಲ್ಲ. ಇದು ಅವರೆಲ್ಲರ ಮನಸ್ಸಿನ ವಿರುದ್ಧವಾಗಿ ಇದ್ದಾಗ್ಯೂ ಅವರು ತಮ್ಮ ಹೊಟ್ಟೆಯ ಸಲುವಾಗಿ ಪರಮೇಶ್ವರನ ಮೇಲೆ ಭಾರವನ್ನು ಹಾಕಿ ಆತನನ್ನೇ ನೆನೆಯುತ್ತ ಕುಳಿತುಬಿಟ್ಟರು. ಈ ಪ್ರಕಾರ ಅವರೆಲ್ಲರು ಕುಳಿತುಬಿಟ್ಟಾಗ್ಗೆ ಒಂದು ದಿವಸ ಹೃಷಿಕೇಶದಲ್ಲಿಯ ಕಲಕತ್ತಾ ಕ್ಷೇತ್ರ ಮಂಡಲದ ವ್ಯವಸ್ಥಾಪಕರಾದ ಸ್ವಾಮಿ ರಾಮನಾಥರೆಂಬವರು ಗಂಗೋತ್ರಿ ಮಾರ್ಗದಲ್ಲಿಯ ಕ್ಷೇತ್ರಗಳ ವ್ಯವಸ್ಥೆಯನ್ನು ಮಾಡುವದಕ್ಕಾಗಿ ಅಲ್ಲಿಗೆ ಅಕಸ್ಮಾತ್ತಾಗಿ ಬಂದರು. ಆಗ ಅವರಿಗೆ ತೀರ್ಥರಾಮರು ತಮ್ಮ ಪರಿವಾರ ಸಹಿತ ಬಂದ ವರ್ತಮಾನವು ಗೊತ್ತಾಯಿತು. ಕೂಡಲೇ ಅವರು ತೀರ್ಥರಾಮರ ದರ್ಶನಕ್ಕಾಗಿ ಆ ಉದ್ಯಾನವನಕ್ಕೆ ಬಂದು ಅಲ್ಲಿಯ ಯಾವತ್ತು ಜನರು ಈಶ್ವರಧ್ಯಾನದಲ್ಲಿ ನಿಮಗ್ನರಾದ್ದನ್ನು ಕಂಡು ಸಂತೋಷಪಟ್ಟು ಸ್ವಸಂತೋಷದಿಂದ ಆ ಎಲ್ಲ ಜನರಿಗೆ ಪ್ರತಿ ತಿಂಗಳಿಗೆ ಹತ್ತು ರುಪಾಯಿಗಳ ಧಾನ್ಯಗಳನ್ನು ಕೊಡಲಿಕ್ಕೆ ಒಬ್ಬ ಅಂಗಡಿಯ

ವನಿಗೆ ಅಪ್ಪಣೆ ಮಾಡಿ ಅಲ್ಲಿಂದ ಹೊರಟು ಹೋದರು. ಪರಮೇಶ್ವರನ ಮೇಲೆ ಭಾರಹಾಕಿ ಕುಳಿತಂಥ ಜನರು ಈ ಪ್ರಕಾರ ಅನಾಯಾಸದಿಂದ ತಮ್ಮ ಜೀವನದ ವ್ಯವಸ್ಥೆಯಾದದ್ದನ್ನು ಕಂಡು ಆಶ್ಚರ್ಯಪಟ್ಟರು. ಇದರಿಂದ ಪರಮೇಶ್ವರನ ಮೇಲಿನ ಅವರ ಶ್ರದ್ಧೆಯು ದ್ವಿಗುಣಿತವಾಯಿತು. ಹಾಗೂ ಅವರು ಪರಮೇಶ್ವರನ ಧ್ಯಾನ ಮತ್ತು ಭಜನಗಳನ್ನು ಮೊದಲಿನಕಿಂತ ಹೆಚ್ಚು ಉತ್ಸಾಹದಿಂದ ಮಾಡಹತ್ತಿದರು. ತೀರ್ಥರಾಮರಂತೂ ಪರಮೇಶ್ವರನಲ್ಲಿ ಹೆಚ್ಚು ಲೀನರಾಗಿ ಹೆಚ್ಚಿನ ಆತ್ಮಾನುಭವವನ್ನು ಸಂಪಾದಿಸಹತ್ತಿದರು. ಹಾಗೂ ತಮ್ಮ ವಿರಾಮದ ಕಾಲಕ್ಕೆ 'ಅಲಿಫ' ಮಾಸಪತ್ರಿಕೆಯ ಬಗ್ಗೆ ಲೇಖಗಳನ್ನು ಒರೆದು ಕಳಿಸಹತ್ತಿದರು.

ಈ ಪ್ರಕಾರ ಎಲ್ಲರು ಆ ತಪೋವನದಲ್ಲಿ ಇರುತ್ತಿದ್ದಾಗ್ಗೆ ಒಂದು ದಿವಸ ಮಧ್ಯರಾತ್ರಿ ತೀರ್ಥರಾಮರು ಅಕಸ್ಮಾತ್ತಾಗಿ ಉತ್ತರ ಕಾಶಿಯ ದಾರಿಯನ್ನು ಹಿಡಿದು ಹೊರಟು ಹೋದರು! ಆಗ ಆಕಾಶದಲ್ಲಿ ಮೋಡವು ತುಂಬಿ ಕಗ್ಗತ್ತಲವು ಕವಿದಿತ್ತು. ಗುಡುಗು ಮಿಂಚುಗಳು ಆಗಲಿಕ್ಕೆ ಹತ್ತಿದ್ದವು. ರಭಸದಿಂದ ಮಳೆಯು ಸುರಿಯುತ್ತಿತ್ತು. ತೀರ್ಥರಾಮರ ಮೈತುಂಬ ಬಟ್ಟೆಗಳಾಗಲಿ, ಅವರ ಕಾಲಲ್ಲಿ ಪಾದರಕ್ಷೆಯಾಗಲಿ ಇದ್ದಿಲ್ಲ. ಅವರು ತಾವು ಉಟ್ಟುಕೊಂಡ ಒಂದು ಪಂಜೆಯಿಂದಲೇ ಉನ್ನತವಾದ ಬೆಟ್ಟಗಳನ್ನು ಒಂದರಮೇಲೊಂದು ಹತ್ತಿ ಇಳಿದರು. ಬೆಟ್ಟಗಳಿಂದ ಗಿರಿನದಿಯು ಪ್ರವಾಹಗಳು ಭಯಂಕರವಾಗಿ ಹರಿಯುತ್ತಿದ್ದವು. ಇಂಥ ಸ್ಥಿತಿಯಲ್ಲಿ ಅವರು ವನ್ಯಪಶುಗಳಿಗಾಗಲಿ, ಭಯಂಕರವಾದ ಸ್ಥಳಕ್ಕಾಗಲಿ ಕಿಂಚಿತ್ತಾದರೂ ಹೆದರದೆ ಮುಂದೆ ಸಾಗಿದರು. ಈ ಪ್ರಕಾರ ಹೋಗುವಾಗ್ಗೆ ಅವರಿಗೆ ಮುಂದೆ ಮಾರ್ಗವು ಕಾಣದಂತಾಯಿತು. ಆದರೆ ಮುಂದೆ ಒಮ್ಮಿಂದೊಮ್ಮೆ ಅವರ ಎದುರಿಗೆ ಒಂದು ದೊಡ್ಡ ಪಡಿಗಲ್ಲು ಕಾಣಿಸಿತು. ಆಗ ತೀರ್ಥರಾಮರು ಅದರ ಸಂದುಗಳಿಂದ ತೂಗಿಬಿದ್ದಿದ್ದ ಹುಲ್ಲುಗಳನ್ನು ಹಿಡಿದುಕೊಂಡು ಅದರ ಮೇಲೆ ಹೆಪ್ಪುಗಟ್ಟಿದ ಬರ್ಫಿನಮೇಲೆ ಒಳ್ಳೇ ಚಟುವಟಿಕೆಯಿಂದ ಕಾಲಿಟ್ಟು ಹೋಗಿ ಕುಳಿತು ಬಾಯಿಂದ 'ಓಂ. ಓಂ. ಓ.' ಎಂದು ಜಪಮಾಡುತ್ತ ನಿಜಾನಂದದಲ್ಲಿ ಮುಳುಗಿ ಹೋದರು. ಅವರು ಕೆಲವು ದಿವಸಗಳವರಗೆ ಆ ಸ್ಥಳವನ್ನು ಬಿಟ್ಟು ಎರಡನೇ ಕಡೆಗೆ ಕದಲಲಿಲ್ಲ.

ಈ ಪ್ರಕಾರ ತೀರ್ಥರಾಮರು ಒಮ್ಮಿಂದೊಮ್ಮೆ ಆಶ್ರಮದಿಂದ ಅದೃಶ್ಯರಾದದ್ದನ್ನು ನೋಡಿ ಅವರ ಹೆಂಡತಿಯು ಎದೆ ಒಡೆದುಕೊಂಡು ಬೇನೆಬಿದ್ದಳು. ಅವಳ ಬೇನೆಯ ಕಾಲದಲ್ಲಿಯೂ ಕೆಲವು ದಿವಸ ತೀರ್ಥರಾಮರು ಅವಳ ಹತ್ತರ ಇದ್ದಿಲ್ಲ. ಮುಂದೆ ತೀರ್ಥರಾಮರು ಅಲ್ಲಿಗೆ ಬಂದರು. ಅವರಿಗೆ ತಮ್ಮ ಹೆಂಡತಿಯು ಬೇನೆಬಿದ್ದದ್ದಕ್ಕಾಗಿ ಏನೂ ಅನ್ನಿಸಲಿಲ್ಲ. ಆದರೆ ಅವಳು ಒಮ್ಮೆ ಬೇನೆಯಿಂದ ಹಾಸಿಗೆ ಹಿಡಿದು ಮಲಗಿದವಳು ಕಡೆಯತನಕ ಹಾಗೇ ಮಲಗಿಬಿಟ್ಟಳು. ಇದಲ್ಲದೆ ಅರಣ್ಯವಾಸದ ಕಷ್ಟವು ಒಂದೇಸವನೆ ನಡೆದಿತ್ತು. ಅವಳ ಬೇನೆಯ ಕಾಲಕ್ಕೆ ಯೋಗ್ಯವಾದ ಔಷಧೋಪಚಾರವಾಗಲಿ, ಶುಶ್ರೂಷೆಯಾಗಲಿ ಆಗಲಿಕ್ಕೆ ಮಾರ್ಗವಿದ್ದಿಲ್ಲ. ಆದುದರಿಂದ ತೀರ್ಥರಾಮರು ಅವಳನ್ನೂ, ತಮ್ಮ ಮಕ್ಕಳನ್ನೂ ನಾರಾಯಣ ಸ್ವಾಮಿಯ ಕೂಡ ತಮ್ಮ ಮನೆಗೆ ಕಳಿಸಿಕೊಟ್ಟರು. ಆದರೂ ಅವಳ ಪ್ರಕೃತಿಯು ಕಡೆತನಕ ನೆಟ್ಟಗಾಗಲಿಲ್ಲ. ಅವಳು ತೀರ್ಥರಾಮರು ಸಮಾಧಿಸ್ಥರಾದ ಏಳು ತಿಂಗಳುಗಳ ತರುವಾಯ ಅಂದರೆ ತಾ. ೨೪ ನೇ ಮೇ ಸನ್ನ ೧೯೦೭ ನೇ ಇಸವಿಯ ದಿವಸ ತೀರಿಕೊಂಡಳು.

ಈ ಪ್ರಕಾರ ತೀರ್ಥರಾಮರು ತಮ್ಮ ಹೆಂಡತಿಯನ್ನೂ ಮಕ್ಕಳನ್ನೂ ತಪೋವನದಿಂದ ಕಳಿಸಿಕೊಟ್ಟ ಮೇಲೆ ಮುಂದೆ ತಾವೊಬ್ಬರೇ ಸುಮಾರು ನಾಲ್ಕುತಿಂಗಳುಗಳಮಟ್ಟಿಗೆ ನಿಜಾನಂದದಲ್ಲಿ ನಿಮಗ್ನರಾಗಿ ಅಲ್ಲಿಯೇ ಇದ್ದರು. ಅವರಿಗೆ ತಿರುಗಿ ಜನರಿದ್ದಲ್ಲಿಗೆ ಹೋಗುವ ಮನಸ್ಸು ಆಗಲಿಲ್ಲ. ಅವರಿಗೆ ಏಕಾಂತ ವಾಸವೇ ಬಹಳ ಸುಖಕರವಾಗಿ ಕಾಣಿಸಹತ್ತಿತು.

## ಸನ್ಯಾಸಾಶ್ರಮ.

ಶ್ರೀ ದ್ವಾರಕಾ ಮಠದ ಶಂಕರಾಚಾರ್ಯರಾದ ರಾಜರಾಜೇಶ್ವರ ತೀರ್ಥರು ನಮ್ಮ ಚರಿತ್ರನಾಯಕರಾದ ತೀರ್ಥರಾಮರಿಗೆ—“ನಿಮಗೆ ಸನ್ಯಾಸಾಶ್ರಮವನ್ನು ಸ್ವೀಕಾರಮಾಡುವ ಅಪೇಕ್ಷೆಯಾದಾಗ್ಗೆ ನೀವು ಪವಿತ್ರ ಗಂಗಾನದಿಯಲ್ಲಿ ಅದನ್ನು ಸ್ವೀಕಾರ ಮಾಡಬಹುದು” ಎಂದು ಮೊದಲೇ ಉಪದೇಶ ಮಾಡಿದ್ದರು. ಆ ಪ್ರಕಾರ ಅವರು ಸನ್ನ ೧೯೦೧ ನೇ ಇಸವಿಯ ಆರಂಭದಲ್ಲಿ (ಶಕೆ ೧೮೨೨ ನೇ ಮಾರ್ಗಶೀರ್ಷ ಮಾಸದಲ್ಲಿ) ಅಂದರೆ ತಮ್ಮ ೨೮ ನೇ ವರ್ಷದ

ಪ್ರಾಯದಲ್ಲಿ ಗಂಗಾಮಾತೆಯ ಪವಿತ್ರವಾದ ಮತ್ತು ರಮ್ಯವಾದ ತೀರ್ಥದ ಮೇಲೆ ಕುಳಿತುಬಿಟ್ಟು 'ಓಂ. ಓಂ. ಓಂ' ಎಂದು ಒಂದೇ ಸವನೆ ಜಪಮಾಡುತ್ತ ತಮ್ಮ ಯಜ್ಞೋಪವೀತವನ್ನು ತೆಗೆದು ಗಂಗಾನದಿಯಲ್ಲಿ ತೇಲಿಬಿಟ್ಟು ಭಗವೀ ವಸ್ತ್ರಗಳನ್ನು ಧರಿಸಿದರು! ತೀರ್ಥರಾಮರಿಗೆ ಸನ್ಯಾಸ ದೀಕ್ಷೆಯನ್ನು ತೆಗೆದು ಕೊಳ್ಳಲಿಕ್ಕೆ ಉಪದೇಶ ಮಾಡಿದವರು ತೀರ್ಥಸನ್ಯಾಸಿಗಳಿದ್ದದರಿಂದ ತೀರ್ಥ ರಾಮರು ತಮ್ಮ ಸನ್ಯಾಸಾಶ್ರಮದ ಹೆಸರನ್ನು **ರಾಮತೀರ್ಥರು** ಎಂದು ಧಾರಣ ಮಾಡಿದರು.

## ತೀರ್ಥಾಟನೆ.

ಈ ಪ್ರಕಾರ ರಾಮತೀರ್ಥರು ಸನ್ಯಾಸಾಶ್ರಮವನ್ನು ಸ್ವೀಕಾರ ಮಾಡಿದ ವರ್ತಮಾನವು ತೀವ್ರವಾಗಿಯೇ ಲಾಹೋರ ಪಟ್ಟಣಕ್ಕೆ ಹೋಗಿ ತಲುಪಿತು. ಆಗ ಅವರ ಅನೇಕಮಂದಿ ಭಕ್ತರು, ಶಿಷ್ಯರು, ಮಿತ್ರರು ಮತ್ತು ಪರಿಚಯಸ್ಥರು ಅವರ ಸಂದರ್ಶನಕ್ಕಾಗಿ ಬರಲಿಕ್ಕೆ ಹತ್ತಿದರು. ಇದನ್ನು ನೋಡಿ ಸ್ವಾಮಿ ಗಳು ಆ ಸ್ಥಳವನ್ನು ಬಿಟ್ಟು ೪-೫ ಮೈಲು ಅಂತರದ ಮೇಲಿದ್ದ ಇನ್ನೊಂದು ಸ್ಥಳಕ್ಕೆ ಹೋದರು. ಅಲ್ಲಿಯೂ ಮೇಲಿನಂತೆಯೇ ಜನರು ಬರಲಿಕ್ಕೆ ಹತ್ತಿ ದರು. ಆಗ ಸ್ವಾಮಿಗಳು ನಾರಾಯಣಸ್ವಾಮಿ ಮತ್ತು ತುಲಾರಾಮ ಎಂಬ ಇಬ್ಬರು ಶಿಷ್ಯರನ್ನು ತಮ್ಮ ಸಂಗಡ ಕರಕೊಂಡು ಯಮುನೋತ್ರಿಗೆ ಪ್ರಯಾಣ ಮಾಡಿದರು. ಅವರು ಕೆಲವು ದಿವಸ ಒಂದು ಗುಹೆಯಲ್ಲಿಯೂ, ಕೆಲವು ದಿವಸ ಒಂದು ಪರ್ಣಕುಟಿಯಲ್ಲಿಯೂ ಇದ್ದರು.

ಅಲ್ಲಿ ಅವರು ಇರುವಾಗ ಒಂದುಸಾರೆ ಯಮುನೋತ್ರಿಯ ಉಗಮದ ಮೇಲಿರುವ ಹಿಮಾಚ್ಛಾದಿತವಾದ ಸುಮೇರು ಶಿಖರಕ್ಕೆ ಹೋದರು. ಆ ಮೇಲೆ ಒಂದು ತಿಂಗಳದ ತರುವಾಯ ಯಮುನೋತ್ರಿಯಿಂದ 'ಬಾಂದರ ಪುಚ್ಛ' (ವಾನರ ಪುಚ್ಛ) ಎಂಬ ಯಾತ್ರೆಗೆ ಹೋದರು. ಮುಂದೆ ಅವರು ಹಿಮಾಲ ಯದ ಮಾರ್ಗದಿಂದ ಗಂಗೋತ್ರಿಗೆ ಬಂದರು. ಆ ಮಾರ್ಗವು ಅತಿ ಕಠಿಣವಿ ದ್ದದರಿಂದ ಗಂಗೋತ್ರಿಗೆ ಹೋಗುವವರಿಗೆ ಸಾಧಾರಣವಾಗಿ ಹತ್ತು ಹನ್ನೆ ರಡು ದಿವಸಗಳು ಬೇಕಾಗುವವು. ಆದರೆ ರಾಮತೀರ್ಥರು ಆರು ದಿವಸಗಳ

ಲ್ಲಿಯೇ ಅಲ್ಲಿಗೆ ಹೋಗಿ ಮುಟ್ಟಿದರು. ಅವರು ಅಲ್ಲಿ ಒಂದು ತಿಂಗಳ ಮುಟ್ಟಿಗೆ ಇದ್ದು ಕೇದಾರನಾಥ ಮತ್ತು ಬದರೀನಾರಾಯಣ ಇವುಗಳ ಯಾತ್ರೆಯನ್ನು ಮಾಡಿದರು. ಈ ರೀತಿಯಿಂದ ರಾಮತೀರ್ಥರು ಆರು ತಿಂಗಳುಗಳ ಪರಿಯಂತರ ಯಾತ್ರೆಗಳನ್ನು ಮಾಡಿಕೊಂಡು ಸನ್ನ ೧೯೦೧ ನೇ ಇಸವಿಯ ದಿಶಂಬರ ತಿಂಗಳದಲ್ಲಿ ರಾಮಕೃಷ್ಣ ಕಾರ್ಯಾಲಯದ ಮುಖ್ಯಸ್ಥಳವಾದ ಆಲಮೋರಾಕ್ಕೆ ಹೋಗಿ ಅಲ್ಲಿಂದ ಮಥುರೆಗೆ ಬಂದರು.

ಮಥುರೆಯಲ್ಲಿ 'ಶಾಂತಿ ಆಶ್ರಮ'ದ ಸಂಸ್ಥಾಪಕರಾದ ಶಿವಗಣಾಚಾರ್ಯರು ಭಾರತ ಧರ್ಮ ಮಹಾಸಭೆಯನ್ನು ನೆರೆಯಿಸಿ ಸ್ವಾಮೀ ರಾಮತೀರ್ಥರನ್ನು ಅದರ ಅಧ್ಯಕ್ಷಸ್ಥಾನಕ್ಕೆ ಯೋಜನೆ ಮಾಡಿದರು. ಆ ಪ್ರಕಾರ ಸ್ವಾಮೀ ರಾಮತೀರ್ಥರು ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿ ಸಭೆಯ ವ್ಯಾಸಪೀಠದ ಮೇಲಿಂದ ಕೊಟ್ಟ ಉಪನ್ಯಾಸವನ್ನು ಕೇಳಿ ಸಾವಿರಾರು ಜನ ಶ್ರೋತೃಗಳು ಅತ್ಯಂತ ಮೋಹಿತರಾದರು. ಉಪನ್ಯಾಸವು ಎಷ್ಟು ಹೊತ್ತು ನಡೆದಾಗ್ಯೂ ಶ್ರೋತೃಗಳಿಗೆ ತೃಪ್ತಿಯಾಗಲಿಲ್ಲ. ಅಲ್ಲಿ ಉಪನ್ಯಾಸವು ನಡೆದಾಗೆಲ್ಲ ಶ್ರೋತೃಗಳ ಸಮುದಾಯವು ಹೆಚ್ಚಾಗುತ್ತಲೇ ಇತ್ತು. ಅದರಿಂದ ಸಭಾರಂಗದ ಸ್ಥಳವು ಸಾಕಾಗದೆ ಹೋಯಿತು. ಆಗ ಸ್ವಾಮಿಗಳು ಯಮುನಾನದಿಯ ಉಸುಬಿನ ಬೈಲಿನಲ್ಲಿ ಉಪನ್ಯಾಸ ಕೊಡುವದನ್ನು ನಿಶ್ಚಯಿಸಲು ಶ್ರೋತೃಜನರು ಅವರ ಬೆನ್ನುಹತ್ತಿ ಆ ಉಸುಬಿನ ಬೈಲಿಗೆ ಹೋದರು. ಆಗ ಶರದೃತುವು ಇದ್ದುದರಿಂದ ರಾತ್ರಿಯಲ್ಲಿ ವಿಶೇಷ ಚಳಿಯು ಬಿದ್ದಿತ್ತು. ಉಸುಬು ಅತ್ಯಂತ ತಣ್ಣಗಾಗಿತ್ತು. ಆದರೂ ಶ್ರೋತೃ ಜನರು ಸ್ವಾಮಿ ರಾಮತೀರ್ಥರ ಉಪನ್ಯಾಸವನ್ನು ಕೇಳಲಿಕ್ಕೆ ಚಿತ್ರದೊಳಗಿನ ಗೊಂಬೆಗಳಂತೆ ತಟಸ್ಥರಾಗಿ ಕುಳಿತು ಬಿಟ್ಟರು. ಯಾರಿಗೂ ಸ್ವಾಮಿಗಳ ಬಾಯಿಂದ ಬಂದ ಮುಕ್ತಾಫಲಗಳನ್ನು ಕೇಳದೆ ಏಳಲಿಕ್ಕೆ ಮನಸ್ಸಾಗಲಿಲ್ಲ. ಸಚ್ಚಿದಾನಂದ ಸ್ವರೂಪನೇ ತಮ್ಮ ಮುಂದೆ ಪ್ರತ್ಯಕ್ಷ ನಿಂತು ಉಪನ್ಯಾಸವನ್ನು ಕೊಡುವಾಗ ಯಾರಿಗೆ ಅಲ್ಲಿಂದ ಎದ್ದು ಹೋಗುವ ಮನಸ್ಸಾಗಬೇಕು?

ಮಥುರೆಯಿಂದ ಸನ್ನ ೧೯೦೨ ನೇ ಇಸವಿಯ ಫೇಬ್ರುವಾರಿ ತಿಂಗಳದಲ್ಲಿ ಸರ್ಜನಲಾಲ ಪಾಂಡೆ ಎಂಬವರು ಫೈಜಾಬಾದದ ಧರ್ಮ ಸಭೆಗೆ ಕರೆದೊಯ್ದು

ರು. ಮುಂದೆ ಸ್ವಾಮಿಗಳು ಲಖನೌ, ಆಗ್ರಾ ಮುಂತಾದ ಪಟ್ಟಣಗಳಿಗೆ ಅಡ್ಡಾಡಿ ಸನಾತನ ವೈದಿಕ ಧರ್ಮವನ್ನು ಕುರಿತು ಜನರಿಗೆ ಉಪದೇಶಮಾಡಿದರು. ಅದೇ ಸಮಯದಲ್ಲಿ ಸ್ವಾಮಿಗಳು ತಮ್ಮ ಶಿಷ್ಯ ನಾರಾಯಣಸ್ವಾಮಿಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟು ಸನಾತನ ಧರ್ಮದ ಉಪದೇಶಮಾಡುವದಕ್ಕಾಗಿ ಸಿಂಧಪ್ರಾಂತಕ್ಕೆ ಕಳುಹಿಸಿ ತಾವು ಪುನಃ ಟೇಹರಿ ಸಂಸ್ಥಾನದೊಳಗಿನ ಅರಣ್ಯಕ್ಕೆ ಹೋದರು. ಅಲ್ಲಿಗೆ ಟೇಹರಿಯ ಮಹಾರಾಜರು ಸಂಚರಿಸುತ್ತಾ ಹೋಗಿ ರಾಮತೀರ್ಥರು ಬಂದಿರುವ ವರ್ತಮಾನವನ್ನು ಕೇಳಿ ಆಗಿಂದಾಗಲೇ ಅವರ ದರ್ಶನಕ್ಕೆ ಹೋದರು. ಟೇಹರಿಯ ಮಹಾರಾಜರು ಸ್ಪೆನ್ಸರನಂಥ ಪಾಶ್ಚಿಮಾತ್ಯ ತತ್ವಜ್ಞಾನಿಯ ಗ್ರಂಥಗಳನ್ನು ಓದಿಕೊಂಡು ನಿರೀಶ್ವರವಾದಿಯು (ನಾಸ್ತಿಕರು) ಆಗಿದ್ದರು. ಆದರೆ ಅವರು ಆತ್ಮಾನಂದವನ್ನು ಪೂರ್ಣವಾಗಿ ಪಡೆದುಕೊಂಡ ರಾಮತೀರ್ಥರಂಥ ಸಾಧುಗಳ ದರ್ಶನವನ್ನು ತೆಗೆದುಕೊಂಡು ಅವರ ಸಂಗಡ ಕೆಲವು ಹೊತ್ತು ಸಂಭಾಷಣ ಮಾಡಿದಕೂಡಲೆ ಅವರ ಯಾವತ್ತು ಸಂಶಯಗಳು ಪರಿಹಾರವಾಗಿ ಅವರು ಪೂರ್ಣ ಆಸ್ತಿಕರಾದರು. ಇಷ್ಟೇ ಅಲ್ಲ, ಅವರು ರಾಮತೀರ್ಥರ ಭಕ್ತರಾದರು. ಮುಂದೆ ಅಮೇರಿಕಾಖಂಡದೊಳಗೆ ಚಿಕಾಗೋ ಪಟ್ಟಣದಲ್ಲಿ ಹಿಂದಕ್ಕೆ ಜಗದ್ಧರ್ಮ ಪರಿಷತ್ತು ನೆರೆದಂತೆ ಜಪಾನದೊಳಗೆ ಟೋಕಿಯೋ ಪಟ್ಟಣದಲ್ಲಿ ಜಗದ್ಧರ್ಮ ಪರಿಷತ್ತು ನೆರೆಯುವದೆಂದು ಸನ್ನ ೧೯೦೨ ನೇ ಇಸವಿಯ ಜುಲೈ ತಿಂಗಳದ ವರ್ತಮಾನಪತ್ರಗಳಲ್ಲಿ ಪ್ರಸಿದ್ಧವಾಗಿತ್ತು. ಸ್ವಾಮೀ ವಿವೇಕಾನಂದರು ಚಿಕಾಗೋದ ಜಗದ್ಧರ್ಮ ಪರಿಷತ್ತಿನಲ್ಲಿ ಭಾರತ ಧರ್ಮದ ತೇಜಸ್ಸನ್ನು ಪ್ರಕಟಗೊಳಿಸಿದಂತೆ ಸ್ವಾಮೀ ರಾಮತೀರ್ಥರು ಟೋಕಿಯೋದ ಜಗದ್ಧರ್ಮ ಪರಿಷತ್ತಿನಲ್ಲಿಯೂ ಪ್ರಕಟಗೊಳಿಸಬೇಕೆಂಬ ಉತ್ಕಟ ಅಭಿಮಾನದಿಂದ ಟೇಹರಿಯ ಮಹಾರಾಜರು ಸ್ವಾಮೀ ರಾಮತೀರ್ಥರನ್ನು ಜಪಾನಕ್ಕೆ ಕಳಿಸಬೇಕೆಂದು ಆಲೋಚನೆ ಮಾಡಿ ತಮ್ಮ ಮನೋದಯವನ್ನು ಸ್ವಾಮೀ ರಾಮತೀರ್ಥರಿಗೆ ತಿಳಿಸಿದರು. ಆದಕ್ಕೆ ಅವರು ಒಮ್ಮೆಲೆ ಒಡಂಬಟ್ಟರು. ಆ ಬಳಿಕ ಟೇಹರಿಯ ಮಹಾರಾಜರು ಕೂಡಲೇ ಥಾಮಸ್ಸ ಕುಕ್ಕ ಕಂಪನಿಯವರ ಉಗಿಹಡಗದಿಂದ ರಾಮತೀರ್ಥರನ್ನು ಜಪಾನಕ್ಕೆ ಕಳಿಸಿಕೊಡುವ ವ್ಯವಸ್ಥೆಯನ್ನು ಮಾಡಿದರು.

# ಜಪಾನ ದೇಶದ ಪ್ರವಾಸ.

ಆ ಮೇರೆಗೆ ರಾಮತೀರ್ಥರು ಜಪಾನಕ್ಕೆ ಹೋಗುವದಕ್ಕಾಗಿ ಕಲಕತ್ತೆಗೆ ಹೊರಟು ಬಂದು ಕಲಕತ್ತೆಯ ಜನರ ಆಗ್ರಹದ ಮೂಲಕ ತಮ್ಮ ಸಂಗಡ ನಾರಾಯಣ ಸ್ವಾಮಿಯನ್ನು ಕರಕೊಂಡು ೧೯೦೨ ನೇ ಇಸವಿಯ ಅಗಸ್ಟ ೨೮ ನೇ ತಾರೀಖಿನ ದಿವಸ ಜಪಾನಕ್ಕೆ ಪ್ರಯಾಣ ಮಾಡಿದರು. ಆಗ ಅವರ ಪ್ರಾಯವು ೨೯ ಇತ್ತು. ಅವರು ಜಪಾನಕ್ಕೆ ಹೋಗುವಾಗ ದಾರಿಯಲ್ಲಿ ಪೇನಾಂಗ, ಹಾಂಗಕಾಂಗ, ಶಾಂಘಾಯ, ನಾಗಾಸಾಕಿ, ಯಾಕೋಹಾಮಾ ಮುಂತಾದ ಸ್ಥಳಗಳು ಹತ್ತಿದವು. ಆ ಎಲ್ಲ ಸ್ಥಳಗಳ ಸಿಂಧೀ ವ್ಯಾಪಾರಸ್ಥರು ಕೂಡಿಕೊಂಡು ಅವರನ್ನು ಹಾಂಕಾಂಗದಲ್ಲಿ ಎಂಟು ದಿವಸ ಬಹಳ ಸನ್ಮಾನ ಮಾಡಿ ಇಟ್ಟುಕೊಂಡರು. ಅಲ್ಲಿ ರಾಮತೀರ್ಥರು ಅವರಿಗೆ ಮತ್ತು ಇತರ ಶ್ರೋತೃಜನರಿಗೆ ನಿತ್ಯದಲ್ಲಿ ಧರ್ಮಾಮೃತವನ್ನು ಪಾನಮಾಡಿಸಿದರು. ಮುಂದೆ ಅವರು ಟೋಕಿಯೋಕ್ಕೆ ಹೋದಬಳಿಕ ಅಲ್ಲಿ ಜಗದ್ಧರ್ಮ ಪರಿಷತ್ತು ನೆರೆಯುವ ವರ್ತಮಾನವು ಸುಳ್ಳೆಂದು ಅವರಿಗೆ ತಿಳಿದುಬಂತು. ಆದುದರಿಂದ ಅವರು ಟೋಕಿಯೋದಲ್ಲಿ ಸ್ವಲ್ಪ ದಿವಸಗಳವರೆಗೆ ಮಾತ್ರ ನಿಂತುಕೊಂಡರು. ಆ ಸ್ವಲ್ಪ ದಿವಸಗಳಲ್ಲಿ ಅವರು ಟೋಕಿಯೋ ಬಾದಶಾಹಿ ವಿಶ್ವವಿದ್ಯಾಲಯದೊಳಗೆ 'ಯಶಸ್ಸಿನ ಗುಟ್ಟು' ಎಂಬ ವಿಷಯದ ಮೇಲೆ ಇಂಗ್ಲಿಷಿನೊಳಗೆ ಉಪನ್ಯಾಸ ಮಾಡಿದರು. ಅದರಿಂದ ಅಲ್ಲಿಯ ವಿದ್ಯಾರ್ಥಿಗಳ ಮೇಲೂ ಅಧ್ಯಾಪಕ ವರ್ಗದ ಮೇಲೂ ಬಹಳ ವಿಲಕ್ಷಣವಾದ ಮತ್ತು ಚಿರಕಾಲ ನಿಲ್ಲುವಂಥ ಪರಿಣಾಮವಾಯಿತು. ಅಲ್ಲಿಯ ಸಂಸ್ಕೃತ ಪ್ರೊಫೆಸರ ಟಾಕಾಕಾತ್ಸೂ ಎಂಬವನು--"ನಾನು ಇಂಗ್ಲಂಡದಲ್ಲಿ ಸಂಸ್ಕೃತ ಅಭ್ಯಾಸ ಮಾಡಲಿಕ್ಕೆ ಇದ್ದಾಗ ಪಂಡಿತ ಮ್ಯಾಕ್ಸಮುಲ್ಲರರ ಮನೆಯಲ್ಲಿ ಮತ್ತು ಜರ್ಮನಿಯೊಳಗಿನ ಕೆಲವು ಸ್ಥಳಗಳಲ್ಲಿ ನನಗೆ ದೊಡ್ಡ ದೊಡ್ಡ ಪಂಡಿತರ ಮತ್ತು ಸಾಧುಗಳ ಸಂದರ್ಶನವಾಗಿತ್ತು. ಆದರೆ ಸ್ವಾಮೀ ರಾಮತೀರ್ಥರಂಥ ವೇದಾಂತ ಪರಾಯಣರಾದ ಸತ್ಪುರುಷರನ್ನು ನಾನು ಇನ್ನೂವರೆಗೆ ಕಂಡಿದ್ದಿಲ್ಲ" ಎಂದು ಅವರ ಬಗ್ಗೆ ಸ್ತುತಿ ಮಾಡಿದನು. ಜಪಾನದಲ್ಲಿಯ ಬೌದ್ಧ ಪಂಡಿತನೂ ಚಿಕಾಗೋ ಜಗದ್ಧರ್ಮ ಪರಿಷತ್ತಿನ ಬೌದ್ಧಧರ್ಮದ ಪ್ರತಿನಿಧಿಯೂ ಆದ ಕಿಂಝೂಹಿರಾಯಿ

ಇವನಂತೂ ತನಗೆ ಸ್ವಾಮೀ ರಾಮತೀರ್ಥರು ಚೀನದ ಮತ್ತು ಜಪಾನದ ಧರ್ಮ ಗ್ರಂಥಗಳಲ್ಲಿ ವರ್ಣನ ಮಾಡಿದ ಬುದ್ಧನ ಕಾಲದ ಮಹಾತ್ಮರಂತೆ ಕಾಣಿಸುತ್ತಾರೆಂದು ಹೇಳಿ ಅವರಿಗೆ **"ಕೇವಲ ಜ್ಞಾನೀರಾಮ"** ಎಂದು ಗೌರವ ಪೂರ್ಣವಾಗಿ ಕರೆಯಹತ್ತಿದನು.

ಸ್ವಾಮೀ ರಾಮತೀರ್ಥರು ಜಪಾನಕ್ಕೆ ಹೋದ ಸಮಯದಲ್ಲಿ ಹಿಂದುಸ್ಥಾನದೊಳಗಿನ ಅನೇಕ ತರುಣ ಜನರು ನಾನಾವಿಧವಾದ ಕಲಾಕೌಶಲ್ಯಗಳನ್ನು ಕಲಿಯುವದಕ್ಕೋಸ್ಕರ ಅಲ್ಲಿಗೆ ಹೋಗಿದ್ದರು. ಅವರಿಗೆ ಸ್ವಾಮೀ ರಾಮತೀರ್ಥರು ಬಂದ ವರ್ತಮಾನವು ತಿಳಿದಕೂಡಲೆ ಅವರೆಲ್ಲರು ಕೂಡಿ ಸ್ವಾಮೀ ರಾಮತೀರ್ಥರನ್ನು ಉತ್ತಮ ರೀತಿಯಿಂದ ಸ್ವಾಗತ ಮಾಡಿದರು. ಈ ತರುಣರಲ್ಲಿ **ಪೂರಣ** ಎಂಬ ಹೆಸರಿನ ಒಬ್ಬ ಶೀಖ ವಿದ್ಯಾರ್ಥೀಯು ಇದ್ದನು. ಅವನು ಜಪಾನದಲ್ಲಿಯ ಯಾವತ್ತು ಹಿಂದೀ ವಿದ್ಯಾರ್ಥಿಗಳಿಗೆ ಪ್ರೋತ್ಸಾಹನ ಮತ್ತು ಸಹಾಯ ಕೊಡುವದಕ್ಕಾಗಿ 'ಹಿಂದೂ ಜಪಾನೀ ಮಂಡಲ' ವನ್ನು ಸ್ಥಾಪಿಸಿ ಅದರ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದನು. ಅವನು ಸ್ವಾಮೀ ರಾಮತೀರ್ಥರ ಉಪನ್ಯಾಸಗಳನ್ನು ಕೇಳಿ ಪರೋಪಕಾರಕ್ಕಾಗಿ ತನ್ನ ದೇಹವನ್ನು ಸವಿಸುವ ದೃಢನಿಶ್ಚಯವನ್ನು ಮಾಡಿ ಸನ್ಯಾಸವನ್ನು ಸ್ವೀಕಾರ ಮಾಡಿ ಜಪಾನದ ತುಂಬೆಲ್ಲ ವೇದಾಂತವನ್ನು ಕುರಿತು ಉಪನ್ಯಾಸಗಳನ್ನು ಕೊಡುತ್ತ ಸಂಚರಿಸಹತ್ತಿದನು. ಹಾಗೂ ಭಾರತ ಧರ್ಮದ ವಿಷಯಗಳನ್ನು ಪ್ರತಿಪಾದಿಸುವಂಥ 'ಉಷಃ ಕಾಲ' ಎಂಬ ಹೆಸರಿನ ಒಂದು ಮಾಸಪತ್ರಿಕೆಯನ್ನು ಹೊರಡಿಸಹತ್ತಿದನು. ಇದರಲ್ಲಿ ಸ್ವಾಮೀ ರಾಮತೀರ್ಥರು ಅನೇಕ ಲೇಖಗಳನ್ನು ಬರೆಯುತ್ತಿದ್ದರು. ಆದರೆ **ಪೂರಣಸಿಂಗನು** ಹಿಂದುಸ್ಥಾನಕ್ಕೆ ಬಂದಬಳಿಕ ತಿರುಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದನು. ಇದೇ ಕಾಲಕ್ಕೆ ಪ್ರೊಫೇಸರ ಛತ್ರೆ ಇವರ ಕುದುರೆಯ ಸರ್ಕಸ್ಸ ಕಂಪನಿಯು ಅಲ್ಲಿಗೆ ಬಂದಿತ್ತು. ಆ ಸರ್ಕಸ್ಸ ಕಂಪನಿಯು ಒಡೆಯರಾದ ವಿಷ್ಣುಪಂತ ಛತ್ರೆ ಇವರು ಸ್ವಾಮೀ ರಾಮತೀರ್ಥರ ಆನಂದಮುದ್ರೆಯನ್ನು ನೋಡಿ ಮತ್ತು ಅವರ ಉಪದೇಶಾಮೃತವನ್ನು ಕೇಳಿ ಅವರ ಮೇಲೆ ಬಹಳ ಮೋಹಪಟ್ಟು ಅವರನ್ನು ತಮ್ಮ ಸಂಗಡ ಅಮೇರಿಕಕ್ಕೆ ಕರಕೊಂಡು ಹೋದರು.

# ಅಮೇರಿಕಾ ದೇಶದ ಪ್ರವಾಸ.

ಸ್ವಾಮೀ ರಾಮತೀರ್ಥರು ಅಮೇರಿಕಕ್ಕೆ ಹೋಗುವಾಗ ಅವರ ಮನಸ್ಸಿನಲ್ಲಿ ಯಾವ ವಿಶಿಷ್ಟ ಉದ್ದೇಶವೂ ಇದ್ದಿಲ್ಲ. ಅವರು ಪ್ರೊಫೆಸರ ವಿಷ್ಣುಪಂತ ಛತ್ರೆಯವರ ನಿಮಂತ್ರಣದ ಪ್ರಕಾರ ಅಮೇರಿಕಕ್ಕೆ ಸಹಜವಾಗಿ ಹೊರಟು ಹೋದರು. ಆದರೆ ಪರಮೇಶ್ವರನ ಸಂಕೇತವು ಯಾರಿಗೆ ತಿಳಿಯುತ್ತದೆ? ೨೦ ನೇ ಶತಕದಲ್ಲಿ ಅಮೇರಿಕದ ಜನರು ಜಡವಿಜ್ಞಾನದ ಪ್ರಯೋಗಶಾಲೆಯಲ್ಲಿ ಕುಳಿತು ನಾನಾತರದ ಐಶ್ವರ್ಯ ಸುಖೋಪಭೋಗಗಳಲ್ಲಿ ಮಗ್ನರಾಗಿದ್ದರು. ಅವರ ಧಾರ್ಮಿಕ ಪ್ರವೃತ್ತಿಯು ನಷ್ಟವಾಗಿತ್ತು. ಇದರಿಂದ ಈಶ್ವರನು ಇರುತ್ತಾನೆಂಬ ಭಾವನೆಯನ್ನು ಸಹ ಅವರು ಮರೆಯುಲಿಕ್ಕೆ ಹತ್ತಿದ್ದರು. ಪುನರ್ಜನ್ಮ ಮತ್ತು ಆತ್ಮದ ಅಮರತ್ವ ಇವುಗಳು ಅವರಿಗೆ ಕೇವಲ ಕಾಲ್ಪನಿಕವಾಗಿದ್ದವು. ವೇದಾಂತವು ಆತ್ಮದ ರಸಾಯನ ಶಾಸ್ತ್ರವು ಎಂಬ ವಿಚಾರವು ಅವರ ಮನಸ್ಸಿಗೆ ಎಂದೂ ಹೊಳೆದಿದ್ದಿಲ್ಲ. ಇಂಥ ಸ್ಥಿತಿಯಲ್ಲಿ ಶ್ರೀ ಸ್ವಾಮೀ ವಿವೇಕಾನಂದರು ಒಮ್ಮೆ ಅಮೇರಿಕಖಂಡಕ್ಕೆ ಹೋಗಿ ವೇದಾಂತದ ಮಾತ್ರೆಯನ್ನು ತೇಯ್ದು ಅವರಿಗೆ ಬಾಲ ಗುಟ್ಟಿಯನ್ನು ಹಾಕಿ ಬಂದಿದ್ದರು. ಈಗ ಅದೇ ಅಲೌಕಿಕ ಕಾರ್ಯವನ್ನು ಪೂರ್ಣ ಮಾಡಿ ಅಮೇರಿಕಾಖಂಡದ ಜನರಲ್ಲಿ ಧರ್ಮಜಾಗ್ರತಿಯನ್ನು ಮಾಡುವದಕ್ಕಾಗಿ ಪರಮೇಶ್ವರನು ಅವರನ್ನು ಅಲ್ಲಿಗೆ ಕಳಿಸಿಕೊಟ್ಟನೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಸ್ವಾಮೀ ರಾಮತೀರ್ಥರು ಹೋಗಿ ಅಮೇರಿಕದಲ್ಲಿ ತಮ್ಮ ಸುಂದರವಾದ ಉಪನ್ಯಾಸಗಳನ್ನು ಕೊಟ್ಟದ್ದರಿಂದ ಅಮೇರಿಕದ ಜನರಲ್ಲಿ ಧರ್ಮಜಾಗ್ರತಿಯಾಯಿತಿಷ್ಟೇ ಅಲ್ಲ, ಹಿಂದೂಧರ್ಮದ ಬಗ್ಗೆ ಮತ್ತು ಹಿಂದೂ ಸಾಧುಗಳ ಬಗ್ಗೆ ಅವರ ಆದರಬುದ್ಧಿಯು ಹೆಚ್ಚಾಯಿತು. ಸ್ವಾಮೀ ರಾಮತೀರ್ಥರು ಜಪಾನದಿಂದ ಅಮೇರಿಕೆಗೆ ಹೋಗುವದಕ್ಕಾಗಿ ಕುಳಿತಂಥ ಉಗಿಹಡಗವು ಸೆಂಟಫ್ರಾನ್ಸಿಸ್ಕೋ ಎಂಬ ಅಮೇರಿಕದ ಪಶ್ಚಿಮ ತುದಿಯ ದೊಡ್ಡ ಬಂದರಕ್ಕೆ ಹೋಗಿ ಮುಟ್ಟಿತು. ಆಗ ಅದರಲ್ಲಿ ಕುಳಿತ ಯಾವತ್ತು ಪ್ರಯಾಣಿಕರು ತಮ್ಮ ಸಾಮಾನುಗಳನ್ನೆಲ್ಲ ಕಟ್ಟಿಕೊಂಡು ಉಗಿಹಡಗದಿಂದ ಕೆಳಗೆ ಇಳಿಯುವ ಬಗ್ಗೆ ಅವಸರ ಮಾಡಲಿಕ್ಕೆ ಹತ್ತಿದ್ದರು. ಆದರೆ ಭಗವೀವಸ್ತ್ರ ಪರಿಧಾನ ಮಾಡಿದ ತೇಜಃಪುಂಜ, ಶಾಂತ ಮತ್ತು ಗಂಭೀರ

ಮೂರ್ತಿಯಾದ ನಮ್ಮ ಚರಿತ್ರನಾಯಕರು ಆ ಬಂದರವನ್ನು ನಾಲ್ಕೂ ಕಡೆಗೆ ನೋಡುತ್ತ ಸುಮ್ಮನೆ ಕುಳಿತುಬಿಟ್ಟಿದ್ದರು. ಅದನ್ನು ಅಲ್ಲಿ ಬಂದರಕ್ಕೆ ಬಂದಿದ್ದ ಒಬ್ಬ ಅಮೇರಿಕನ್ ಗೃಹಸ್ಥನು ನೋಡಿ ಆಶ್ಚರ್ಯಪಟ್ಟು ಸ್ವಾಮೀ ರಾಮ ತೀರ್ಥರೊಡನೆ ಈ ಕೆಳಗೆ ಬರೆದ ಪ್ರಕಾರ ಭಾಷಣ ಮಾಡಿದನು:—

**ಒಬ್ಬ ಗೃಹಸ್ಥ**—ನಿಮ್ಮ ಸಾಮಾನುಗಳು ಎಲ್ಲಿರುತ್ತವೆ?

**ರಾಮ**—ನನ್ನ ಹತ್ತರ ನನ್ನ ಸಾಮಾನುಗಳೇನೂ ಇಲ್ಲ. ಇರುವದೆಲ್ಲ ನನ್ನ ಸಂಗಡವೇ ಇರುತ್ತದೆ.

**ಒಬ್ಬ ಗೃಹಸ್ಥ**—ನಿಮ್ಮ ಹಣವನ್ನು ಎಲ್ಲಿಡುತ್ತೀರಿ?

**ರಾಮ**—ನಾನು ಹಣವನ್ನು ಇಡುವದಿಲ್ಲ.

**ಒಬ್ಬ ಗೃಹಸ್ಥ**—ನೀವು ಹೇಗೆ ಜೀವನ ಮಾಡುತ್ತೀರಿ?

**ರಾಮ**—ನಾನು ಎಲ್ಲರನ್ನು ಪ್ರೀತಿಸುವದರಿಂದ ಜೀವನಮಾಡುತ್ತೇನೆ. ನನಗೆ ನೀರಡಿಕೆಯಾಯಿತೆಂದರೆ ನನಗೆ ಯಾರಾದರೊಬ್ಬರು ಒಂದು ಬಟ್ಟಲು ತುಂಬ ನೀರು ತಂದುಕೊಡುತ್ತಾರೆ. ನನಗೆ ಹಸಿವೆಯಾಯಿತೆಂದರೆ ಯಾರಾದರೊಬ್ಬರು ಒಂದು ತುಣಕು ರೊಟ್ಟಿ ತಂದು ಕೊಡುತ್ತಾರೆ.

**ಒಬ್ಬ ಗೃಹಸ್ಥ**—ಆದರೆ ನಿಮಗೆ ಅಮೇರಿಕದಲ್ಲಿ ಯಾರಾದರೂ ಸ್ನೇಹಿತರು ಅಥವಾ ಪರಿಚಯಸ್ಥರು ಇರುವರೇ?

**ರಾಮ**—ಹೌದು. ನನಗೆ ಒಬ್ಬ ಗೃಹಸ್ಥರದೇ ಮಾತ್ರ ಪರಿಚಯವಿರುತ್ತದೆ.

**ಒಬ್ಬ ಗೃಹಸ್ಥ**—ಅವರು ಯಾರು?

**ರಾಮ**—(ಆ ಗೃಹಸ್ಥನ ಭುಜವನ್ನು ಸ್ಪರ್ಶಮಾಡಿ) ಅವರು ನೀವೇ!

ಈ ಪ್ರಕಾರ ಸ್ವಾಮಿ ರಾಮತೀರ್ಥರು ಆ ಗೃಹಸ್ಥನ ಭುಜವನ್ನು ಸ್ಪರ್ಶಮಾಡಿ 'ನೀವೇ ನನ್ನ ಪರಿಚಯಸ್ಥರು' ಎಂದು ಉತ್ತರ ಕೊಡಲಾಗಿ ಅವನಿಗೆ ಒಮ್ಮಿಂದೊಮ್ಮೆ ಅವರ ಹಳೇ ಪರಿಚಯವು ನೆನಪಿಗೆ ಬಂದಂತೆ ಅನ್ನಿ

ಸಿತು. ಆ ಕೂಡಲೇ ಅವನು ಸ್ವಾಮಿಗಳನ್ನು ಮನೆಗೆ ಕರೆದುಕೊಡು ಹೋಗಿ ಸ್ವಾಮಿಗಳು ಅಮೇರಿಕದಲ್ಲಿ ಇರುವ ಪರಿಯುಂತರ ಅವರ ಆದರಾತಿಥ್ಯವನ್ನು ಉತ್ತಮರೀತಿಯಿಂದ ಮಾಡಿದನು. ಹಾಗೂ ಅಮೇರಿಕದಲ್ಲಿಯು ಅವರ ಸಂಚಾರದ ವ್ಯವಸ್ಥೆಯನ್ನು ಮಾಡಿಕೊಟ್ಟನು. ಆ ಗೃಹಸ್ಥನ ಹೆಸರು ಡಾಕ್ಟರ ಅಲ್ಬರ್ಟ ಹಿಲ್ಲರ ಎಂದು ಇತ್ತು.

ಸ್ವಾಮೀ ರಾಮತೀರ್ಥರು ಅಮೇರಿಕದಲ್ಲಿ ಸುಮಾರು ೨೩ ವರ್ಷಗಳ ಪರಿಯುಂತರ ಇದ್ದರು. ಆದರೂ ಅವರು ತಮ್ಮ ಉಪನ್ಯಾಸದ ಮತ್ತು ಉಪದೇಶದ ವೇಳೆಯು ಹೊರತಾಗಿ ಇತರ ಯಾವತ್ತು ವೇಳೆಯನ್ನು ಕ್ಯಾಲಿಫೋರ್ನಿಯಾದ ಅರಣ್ಯದಲ್ಲಿಯೇ ಕಳೆಯುತ್ತಿದ್ದರು. ಅವರಿಗೆ ಏಕಾಂತವಾಸವು ಯಾವಾಗಲು ಪ್ರಿಯಕರವಾಗಿತ್ತು. ಒಮ್ಮೊಮ್ಮೆ ಅವರು ಸ್ಯಾಕ್ರಾಮೆಂಟೋ ನದಿಯತೀರದ ಮೇಲೆ ಹೋಗಿ ಅನೇಕ ತಾಸುಗಳವರೆಗೆ ಭಗವಚ್ಚಿಂತನೆಯಲ್ಲಿ ಕಳೆಯುತ್ತಿದ್ದರು. ಒಮ್ಮೊಮ್ಮೆ ಎಂಟೆಂಟು ದಿವಸ ಅಲ್ಲಿಯೇ ಇರುತ್ತಿದ್ದರು. ಅವರು ಪಟ್ಟಣದೊಳಗೆ ಬರುತ್ತಿದ್ದಿಲ್ಲ. ಅವರು ಅಮೇರಿಕದಲ್ಲಿರುವಾಗ ತಮಗೆ ಬೇಕಾಗುವ ಕಟ್ಟಿಗೆಯನ್ನು ಅಡವಿಗೆ ಹೋಗಿ ತಮ್ಮ ತಲೆಯಮೇಲೆ ಹೊತ್ತುಕೊಂಡು ಬರುತ್ತಿದ್ದರು. ಅವರಿಗೆ ಶಾರೀರಿಕ ಶ್ರಮ ಮಾಡುವದು ಯಾವಾಗಲು ಸೇರುತ್ತಿತ್ತು. ಅವರು ನಿತ್ಯದಲ್ಲು ಹಣ್ಣು ಹಂಪಲು, ಗಡ್ಡೆ ಗೆಣಸು, ಹಾಲು, ಇವುಗಳನ್ನೇ ಮಾತ್ರ ಸೇವಿಸುತ್ತಿದ್ದರು. ಸ್ವಾಮೀ ವಿವೇಕಾನಂದರು ವಿಲಾಯತಿಯಲ್ಲಿದ್ದಾಗ್ಗೆ ಅವರ ಊಟ ಉಡಿಗೆಗಳು ಯಾವ ಪ್ರಕಾರ ಇದ್ದವೆಂಬ ಬಗ್ಗೆ ಜನರು ಆಡಿಕೊಂಡರೆಂಬುದು ಅವರ ಲಕ್ಷ್ಯದಲ್ಲಿರುತ್ತಿತ್ತು. ಇದಲ್ಲದೆ ಅವರು ತಮ್ಮ ಆಚರಣವು ಯಾವ ರೀತಿಯಿಂದಲೂ ದೋಷಾಸ್ಪದವಿರಬಾರದೆಂದು ಯಾವಾಗಲು ಪ್ರಯತ್ನಮಾಡುತ್ತಿದ್ದರು. ಆದರೆ ಅವರಿಗೆ ಹಿಂದುಸ್ಥಾನದೊಳಗಿನ ಜಾತಿ ನಿರ್ಬಂಧಗಳು ಸೇರುತ್ತಿದ್ದಿಲ್ಲ. ಅವರು ಲಾಹೋರದಲ್ಲಿದ್ದಾಗ ಅವರ ಬೋಧಾಮೃತವನ್ನು ಕೇಳಲಿಕ್ಕೆ ಅನೇಕ ಮಂದಿ ದೊಡ್ಡದೊಡ್ಡ ಗಂಡಸರು ಮತ್ತು ಹೆಂಗಸರು ಅವರ ಸಂದರ್ಶನಕ್ಕೆ ಬರುತ್ತಿದ್ದರು. ಒಮ್ಮೆ ಪ್ರಸಿಡೆಂಟ ರುಝುವೆಲ್ಟರು ಸಹ ಅವರ ಸಂದರ್ಶನಕ್ಕೆ ಬಂದಿದ್ದರು. ಬೇಕಾದವರು ತಮ್ಮ ಮನಸ್ಸಿನಲ್ಲಿ ಧರ್ಮ ಸಂಬಂಧವಾಗಿ ಬೇಕಾದಂಥ ಸಂಶ

ಯುಗಳನ್ನು ತೆಗೆದುಕೊಂಡು ಬಂದರೂ ಅವರು ಅವುಗಳನ್ನು ಸಮಾಧಾನ ಪಡಿಸುತ್ತಿದ್ದರು. ಒಂದು ಸಾರೆ ಒಬ್ಬ ನಾಸ್ತಿಕಳಾದ ಸ್ತ್ರೀಯು ಅವರ ಕೂಡ ತರ್ಕಮಾಡುವ ನಿಶ್ಚಯದಿಂದ ಅವರ ಕಡೆಗೆ ಬಂದಿದ್ದಳು. ಅವಳು ಬಂದಾಗ್ಗೆ ಸ್ವಾಮಿಗಳು ಧ್ಯಾನದಲ್ಲಿ ಆಸಕ್ತರಾಗಿದ್ದರು. ಅವರಿಗೆ ಸಮಾಧಿ ಯು ಹತ್ತಿಹೋಗಿತ್ತು. ಅದನ್ನು ನೋಡಿದವಳೇ ಅವಳು ರಾಮತೀರ್ಥರಿಗೆ- “ಸ್ವಾಮಿಗಳೇ, ನಿಮ್ಮ ದರ್ಶನವಾದ ಕೂಡಲೇ ನನ್ನ ಸಂಶಯಗಳೆಲ್ಲ ಬೈಲಾಗಿ ನನ್ನ ನಾಸ್ತಿಕತೆಯು ಸಹ ಹೊರಟು ಹೋಯಿತು” ಎಂದು ನುಡಿದಳು. ಇನ್ನೊಂದು ಸಾರೆ ಮಿಸೆಸ್ ಬೆಲಮನ್ ಎಂಬ ಇನ್ನೊಬ್ಬ ಸ್ತ್ರೀಯು ಅವರ ಬೋಧಾಮೃತವನ್ನು ಕೇಳಿ, ತನ್ನ ಪಾಶ್ಚಿಮಾತ್ಯ ಉಡುಪುಗಳನ್ನು ತ್ಯಜಿಸಿ, ಭಗವೀವಸ್ತ್ರವನ್ನು ಧರಿಸಿ ಹಿಂದುಸ್ಥಾನಕ್ಕೆ ಬಂದು ಇಲ್ಲಿಯ ಯಾವತ್ತು ಕ್ಷೇತ್ರಯಾತ್ರೆಗಳನ್ನು ಮಾಡಿಕೊಂಡು, ರಾಮತೀರ್ಥರ ಜನ್ಮಸ್ಥಳವಾದ ಮುರ ಲೀವಾಲಾ ಎಂಬ ಗ್ರಾಮವನ್ನು ನೋಡಿ, ತನ್ನ ಜನ್ಮದ ಸಾರ್ಥಕವಾಯಿ ತೆಂದು ನುಡಿದು ಸ್ವದೇಶಕ್ಕೆ ಹೊರಟು ಹೋದಳು.

ಅಮೇರಿಕದಲ್ಲಿ ಬೇಕಾದವರ ಉಪನ್ಯಾಸಗಳು ಆದಾಗ್ಯೂ ಟಿಕೀಟು ಹಚ್ಚಿಯೇ ಮಾಡಿಸುವ ಪದ್ಧತಿಯುಂಟು. ಆದರೆ ಸ್ವಾಮೀ ರಾಮತೀರ್ಥರು ತಾವು ಜ್ಞಾನವನ್ನು ಮಾರಾಟ ಮಾಡುವದಿಲ್ಲೆಂದು ಹೇಳಿ ಟಿಕೀಟು ಇಡದೆ ಧರ್ಮಾರ್ಥವಾಗಿ ತಮ್ಮ ಉಪನ್ಯಾಸಗಳನ್ನು ಮಾಡಿದರು. ಅವರ ಉಪನ್ಯಾ ಸಗಳನ್ನು ಕೇಳಿದ ಕ್ರಿಶ್ಚನ್ ಶ್ರೋತೃಗಳೆಲ್ಲರು ಅವರು ಕ್ರಿಸ್ತನ ಅವತಾರವಿ ರುತ್ತಾರೆಂದು ಹೇಳಿದರು. ಅವರ ಉಪನ್ಯಾಸಗಳನ್ನು ಎಷ್ಟು ಕೇಳಿದಾಗ್ಯೂ ಅಲ್ಲಿಯ ಜನರ ಸಮಾಧಾನವಾಗಲಿಲ್ಲ. ದಿನೇ ದಿನೇ ಅವರ ವೇದಾಂತ ಜ್ಞಾನ ಮಾಡಿಕೊಳ್ಳುವ ಅಪೇಕ್ಷೆಯು ಹೆಚ್ಚಾಗುತ್ತ ನಡೆಯಿತು. ಆಗ ಸ್ವಾಮೀ ರಾಮತೀರ್ಥರು ಅವರಿಗಾಗಿ ಅಲ್ಲಿ ಒಂದು ವೇದಾಂತವರ್ಗವನ್ನು ತೆರೆದರು. ಈ ಪ್ರಕಾರ ಅವರು ಜನರಿಗೆ ಜ್ಞಾನ ಕೊಡುವ ಕೆಲಸದಲ್ಲಿ ತೊಡಗಿಕೊಂಡಿ ದ್ದರೂ ಅಲ್ಲಿಯ ತತ್ವಜ್ಞಾನಿಗಳಾದ ವಾಲ್ಟವ್ಹಿಟಮನ್ನ, ಇಮರಸನ್ನ, ಇಂಗರ ಸಾಲ ಮತ್ತು ಥೋರೋ ಮುಂತಾದವರ ವಾಙ್ಮಯವನ್ನು ಪೂರ್ಣವಾಗಿ ಓದಿ ಮುಗಿಸಿದರು.

ಸ್ವಾಮೀ ರಾಮತೀರ್ಥರು ತಮ್ಮ ಅಮೇರಿಕದ ಪ್ರವಾಸವನ್ನು ಮುಗಿಸಿಕೊಂಡು ಹಿಂದುಸ್ಥಾನಕ್ಕೆ ಬರುವಾಗ್ಗೆ ದಾರಿಯೊಳಗೆ ಇಜಿಪ್ತದಲ್ಲಿ ಇಳಿದು ಕೆರೋ ರಾಜಧಾನಿಗೆ ಹೋಗಿ ಅಲ್ಲಿಯ ಮುಸಲ್ಮಾನರ ಮಸೀದಿಯೊಳಗೆ ಪರ್ಶಿಯನ್ನ ಭಾಷೆಯೊಳಗೆ ತಮ್ಮ ಉಪನ್ಯಾಸವನ್ನು ಮಾಡಿದರು. ಅವರ ಉಪನ್ಯಾಸವನ್ನು ಕೇಳಿದ ಮುಸಲ್ಮಾನ ಶ್ರೋತೃಗಳು ಅವರು ಮಹಮ್ಮದನ ಅವತಾರವಿರುತ್ತಾರೆಂದು ಹೇಳಿದರು. ಈ ಪ್ರಕಾರ ಅವರು ಯಾವತ್ತು ಕಡೆಯಲ್ಲಿ ಉಪದೇಶ ಮಾಡುತ್ತ ಅಡ್ಡಾಡುತ್ತಿದ್ದಾಗ್ಯೂ ಅಲ್ಲಲ್ಲಿಯ ಸೃಷ್ಟಿ ಸೌಂದರ್ಯವನ್ನೂ, ಮಾನವೀ ಸಮಾಜದ ರೀತಿನಡತೆಗಳನ್ನೂ, ಅವರ ಪದ್ಧತಿಯನ್ನೂ ಮಾಡುವ ಕೆಲಸಗಳನ್ನೂ ಸೂಕ್ಷ್ಮವಾಗಿ ನಿರೀಕ್ಷಣ ಮಾಡುತ್ತಿದ್ದರು. ಹೀಗೆ ಸ್ವಾಮಿಗಳು ಸಂಚರಿಸುತ್ತಾ ಸಂಚರಿಸುತ್ತಾ ಜಪಾನದಿಂದ ಹೊರಟು ಪೃಥ್ವಿಯ ಸುತ್ತಲು ಒಂದು ಪ್ರದಕ್ಷಿಣೆಯನ್ನು ಮಾಡಿಕೊಂಡು ತಮ್ಮ ಮಾತೃಭೂಮಿಗೆ ಬಂದರು. ಜರ್ಮನಿ, ಇಂಗ್ಲಂಡ ಮೊದಲಾದ ದೇಶಗಳಲ್ಲಿ ಉಪನ್ಯಾಸ ಮಾಡುವ ಅವರ ಕಾಂಕ್ಷೆಯು ತೃಪ್ತವಾಗಲಿಲ್ಲ. ಆದರೆ ಅವರ ಶಿಷ್ಯನಾದ ನಾರಾಯಣಸ್ವಾಮಿಯು ಅವರ ಪ್ರೇರಣೆಯಿಂದ ಸಿಂಗಾಪುರ, ಪೇನಾಂಗ, ಬ್ರಹ್ಮದೇಶ, ಲಂಕಾ, ಆಫ್ರಿಕಾ, ಮಾಲ್ಟಾ, ಮೋರೋಕೊ, ಜಿಬ್ರಾಲ್ಟರ ಮುಂತಾದ ಸ್ಥಳಗಳಿಗೆ ವೇದಾಂತದ ಉಪದೇಶವನ್ನು ಮಾಡಲಿಕ್ಕೆ ಹೋಗಿ ಅಲ್ಲಿಂದ ಲಂಡನ್ನಕ್ಕೆ ಬಂದನು. ಅವನು ಅಲ್ಲಿ ಸುಮಾರು ೫ ತಿಂಗಳುಗಳ ಮಟ್ಟಿಗೆ ಇದ್ದನು. ಅಲ್ಲಿಯ ಚಳಿಯು ಅವನ ಪ್ರಕೃತಿಗೆ ಆಗಲಿಲ್ಲ. ಇದಲ್ಲದೆ ಬೇಗನೆ ಲಂಡನ್ನದಿಂದ ಹೊರಟು ಬರಲಿಕ್ಕೆ ಸ್ವಾಮಿಗಳ ಕಡೆಯಿಂದ ಅವನಿಗೆ ನಿರೂಪವು ಬಂತು. ಆದುದರಿಂದ ಅವನು ಲಂಡನ್ನವನ್ನು ಬಿಟ್ಟು ಬೇಗನೆ ಹಿಂದುಸ್ಥಾನಕ್ಕೆ ಬಂದನು.

## ಮಾತೃಭೂಮಿಗೆ ಬಂದದ್ದು.

ಸ್ವಾಮೀ ರಾಮತೀರ್ಥರು ಇಜಿಪ್ತದೊಳಗಿನ ಯಾವತ್ತು ಕಾರ್ಯವನ್ನು ಮುಗಿಸಿಕೊಂಡು ಸನ್ನ ೧೯೦೪ನೇ ಇಸವಿಯಲ್ಲಿ ಮುಂಬಯಿ ಬಂದರಕ್ಕೆ ಬಂದು ತಲುಪಿದರು. ಆಗ ಅವರನ್ನು ಸ್ವಾಗತ ಮಾಡಲಿಕ್ಕೆ ಯಾವತ್ತು ಧರ್ಮಗಳ ಮತ್ತು ಯಾವತ್ತು ಪಂಥಗಳ ಜನರು ಹೋಗಿ, ಬಹಳ ಆದರದಿಂದ

ಮತ್ತು ಉತ್ಸವದಿಂದ ಅವರನ್ನು ಕರಕೊಂಡು ಬಂದರು. ಸ್ವಾಮಿಗಳು ಮಾತೃ ಭೂಮಿಗೆ ಬಂದ ನಂತರ ಮುಂಬಯಿಯಲ್ಲಿ ಕೆಲವು ದಿವಸ ಇದ್ದುಕೊಂಡು ಹಿಂದುಗಡೆ ಆಗ್ರಾ, ಮಥುರಾ, ಲಖನೌ ಇವುಗಳಿಗೆ ಹೋಗಿ ಪುಷ್ಕರತೀರ್ಥಕ್ಕೆ (ಅಜಮೀರಕ್ಕೆ) ಹೋದರು. ಪುನಃ ಅಲ್ಲಿಂದ ಅವರು ಸಂಯುಕ್ತ ಪ್ರಾಂತ ಮತ್ತು ಬಂಗಾಲಗಳಿಗೆ ಹೋಗಿ ಸನ್ನ ೧೯೦೫ ನೇ ಇಸವಿಯ ಅಕ್ಟೋಬರ ತಿಂಗಳದಲ್ಲಿ ಹರಿದ್ವಾರಕ್ಕೆ ಹೋದರು. ಅವರು ಹೋದಲ್ಲೆಲ್ಲ ವೇದಾಂತ ರಹಸ್ಯವನ್ನೂ, ಪ್ರವೃತ್ತಿಪರ ಮತ್ತು ನಿವೃತ್ತಿಪರ ವೇದಾಂತವನ್ನೂ ಸ್ವದೇಶ ಬಾಂಧವರಿಗೆ ಯಥಾರ್ಥವಾಗಿ ತಿಳಿಸಿ ಸ್ವದೇಶದ ಸದ್ಯಃಸ್ಥಿತಿಯನ್ನು ಸುಧಾರಿಸುವದಕ್ಕಾಗಿ ಯಾವ ವಿಧಾಯಕ ಕಾರ್ಯವನ್ನು ಕೈಕೊಳ್ಳಬೇಕೆಂಬುದನ್ನು ಸಹ ಅವರ ಮುಂದೆ ವಿವರಿಸಿ ಹೇಳಿದರು. ಅವರು ತಮ್ಮ ಉಪನ್ಯಾಸದಲ್ಲಿ ಸಹಕಾರ್ಯ ಮತ್ತು ಸಂಘಟನೆ ಇವೆರಡು ತತ್ವಗಳಿಂದ ಜಪಾನ ಮತ್ತು ಅಮೇರಿಕಾ ದೇಶಗಳ ಜನರು ಹೇಗೆ ತಮ್ಮ ಉದ್ಧಾರವನ್ನು ಮಾಡಿಕೊಂಡಿರುತ್ತಾರೆಂದು ಸ್ಪಷ್ಟವಾಗಿ ಸಿದ್ಧಮಾಡುತ್ತಿದ್ದರು. ಅವರ ಉಪನ್ಯಾಸಗಳನ್ನು ಕೇಳಲಿಕ್ಕೆ ಹಿಂದೂ, ಮುಸಲ್ಮಾನ, ಸೀಖ, ಫಾರಸಿ, ಕ್ರಿಶ್ಚನ್ ಮುಂತಾದ ಯಾವತ್ತು ಧರ್ಮದ ಜನರು ನೆರಯುತ್ತಿದ್ದರು. ಅವರು ತಮ್ಮ ಉಪನ್ಯಾಸಗಳಲ್ಲಿ 'ಆತ್ಮೋನ್ನತಿ ಮತ್ತು ರಾಷ್ಟ್ರೋದ್ಧಾರ ಇವುಗಳನ್ನು ನಿಮ್ಮ ಧ್ಯೇಯವಾಗಿ ಇಡಿರಿ' 'ಶಿಕ್ಷಣವನ್ನು ಸಾರ್ವತ್ರಿಕವಾಗಿ ಮಾಡಿರಿ' 'ಹಿಂದೀ ಭಾಷೆಯನ್ನು ರಾಷ್ಟ್ರೀಯ ಭಾಷೆಯಾಗಿ ಮಾಡಿರಿ' 'ರಾಷ್ಟ್ರದೊಳಗೆ ಯಾವದೂ ತರದ ಭೇದವನ್ನು ಮಾಡದೆ ಇರುವದರಿಂದ ರಾಷ್ಟ್ರದ ಪ್ರಗತಿಯಾಗುವದು' 'ರಾಷ್ಟ್ರದ ಕಲ್ಯಾಣವಾಗುವದರಿಂದ ರಾಷ್ಟ್ರದೊಳಗಿನ ಘಟಕವಾದ ವ್ಯಕ್ತಿಯ ಕಲ್ಯಾಣವಾಗುವದು' '**ಜಗದುದ್ಧಾರಕ್ಕಾಗಿ ಭಾರತೋದ್ಧಾರ ಮಾಡಬೇಕು**' ಎಂಬದಾಗಿ ಉಪದೇಶಿಸುತ್ತಿದ್ದರು.

## ಪುನಃ ಹಿಮಾಲಯ.

ಸ್ವಾಮೀ ರಾಮತೀರ್ಥರು ಹರಿದ್ವಾರಕ್ಕೆ ಹೋದ ಒಂದು ವಾರದ ನಂತರ ಅತಿಶಯ ಬೇನೆಬಿದ್ದರು. ಅವರಿಗೆ ಅಲ್ಲಿ ಸ್ವಲ್ಪ ನೆಟ್ಟಗಾದ ಬಳಿಕ

ಅವರು ಹಿಂದುಗಡೆ ಹವೆಯನ್ನು ಬದಲಿಸುವದಕ್ಕಾಗಿ ಮುಝಾಫರ ನಗರಕ್ಕೆ ಹೋದರು. ಅಲ್ಲಿ ಅವರ ಪ್ರಕೃತಿಯು ಸುಧಾರಿಸಿದ ನಂತರ ಅವರು ತಮ್ಮ ಶಿಷ್ಯನಾದ ನಾರಾಯಣಸ್ವಾಮಿಯನ್ನು ಕರೆಸಿಕೊಂಡ ತಾವಿಬ್ಬರೂ ಕೂಡಿ ಸನ್ನ ೧೯೦೫ ನೇ ಇಸವಿಯ ನವ್ಹಂಬರ ತಿಂಗಳದಲ್ಲಿ ಹೃಷಿಕೇಶದ ಮಾರ್ಗ ದಿಂದ ಭಾರತಕಾರರಾದ ವ್ಯಾಸಮುನಿಗಳ ತಪಸ್ಸಿನಿಂದ ಪವಿತ್ರವಾದ ಹಾಗೂ ತಪೋವನದಿಂದ ಹತ್ತು ಹರದಾರಿ ದೂರವಿದ್ದ **ವ್ಯಾಸಾಶ್ರಮದ** ಅರಣ್ಯಕ್ಕೆ ಹೋದರು. ಅಲ್ಲಿ ಅವರು ಒಂದು ಸಣ್ಣ ಸುಂದರವಾದ ಗುಡುಸಲವನ್ನು ಕಟ್ಟಿಕೊಂಡು ಇರುತ್ತಿದ್ದರು. ಅವರು ಇರುತ್ತಿದ್ದ ಗುಡುಸಲಕ್ಕೂ ನಾರಾ ಯಣಸ್ವಾಮಿಯು ಇರುತ್ತಿದ್ದ ಗುಡುಸಲಕ್ಕೂ ಸುಮಾರು ಅರ್ಧ ಮೈಲು ಅಂತರವಿತ್ತು. ಆ ಸ್ಥಳದಲ್ಲಿದ್ದಾಗ ಸ್ವಾಮೀ ರಾಮತೀರ್ಥರು **ಸಾಮವೇದ, ಪಾತಂಜಲಭಾಷ್ಯ** ಮತ್ತು **ನಿರುಕ್ತ** ಇವುಗಳ ಅಧ್ಯಯನವನ್ನು ಐದು ತಿಂಗಳುಗಳ ಪರಿಯಂತರ ಮಾಡಿದರು.

## ವಸಿಷ್ಠಾಶ್ರಮ.

ಈ ಮೇರೆಗೆ ಅವರು **ವ್ಯಾಸಾಶ್ರಮಮದಲ್ಲಿ** ಬೇಸಿಗೆಯನ್ನು ಪೂರ್ಣ ವಾಗಿ ಕಳೆದನಂತರ ಮುಂದೆ ತಮ್ಮ ಯಾವತ್ತು ಕಾಲವನ್ನು **ವಸಿಷ್ಠಾಶ್ರಮ** ದಲ್ಲಿ ಕಳೆಯಬೇಕೆಂದು ಅಪೇಕ್ಷಿಸಿ **ದೇವಪ್ರಯಾಗಕ್ಕೆ** ಹೋಗಿ ಅಲ್ಲಿಂದ **ವಸಿಷ್ಠಾಶ್ರಮಕ್ಕೆ** ಹೋದರು. ಈ ಆಶ್ರಮವು ಟೇಹರಿಯಿಂದ ಸುಮಾರು ೨೫ ಹರದಾರಿ ದೂರ ಇತ್ತು. ಹಾಗೂ ಸಮುದ್ರದ ಸಪಾಟಿನ ಮೇಲೆ ಸುಮಾರು ೮೦೦ ಮೈಲು ಎತ್ತರ ಇತ್ತು. ಸ್ವಾಮಿಗಳು ಈ ಆಶ್ರಮದಲ್ಲಿದ್ದಾಗ ಭಾರತ ಧರ್ಮಮಹಾಮಂಡಲದವರಿಂದ ಮತ್ತು ಇತರ ಧಾರ್ಮಿಕ ಸಂಸ್ಥೆಯವರಿಂದ ವೇದಾಂತದ ಉಪದೇಶ ಮಾಡಲಿಕ್ಕೆ ಬರಬೇಕೆಂದು ಅವರಿಗೆ ಆಗಾಗ್ಗೆ ನಿಮಂ ತ್ರಣಗಳು ಬರುತ್ತಿದ್ದವು. ಆದರೆ ಅವರಿಗೆ ಆತ್ಮಚಿಂತನದ ಹೊರತಾಗಿ ಇತರ ಯಾವತ್ತು ವಿಷಯಗಳು ವ್ಯರ್ಥವೆನಿಸಲಿಕ್ಕೆ ಹತ್ತಿದ್ದರಿಂದ ಅವರು ಧರ್ಮೋ ಪದೇಶ ಮಾಡಲಿಕ್ಕೆ ತಮ್ಮ ಬದಲಾಗಿ ನಾರಾಯಣಸ್ವಾಮಿಯನ್ನು ಕಳಿಸಹ ತ್ತಿದರು. ಸ್ವಾಮಿಗಳು ವಸಿಷ್ಠಾಶ್ರಮದಲ್ಲಿ ಇರಲಿಕ್ಕೆ ಹೋದ ತರುವಾಯ ಅವರ ಭೋಜನದ ವ್ಯವಸ್ಥೆಯನ್ನು ಟೇಹರಿಯ ಮಹಾರಾಜರು ತಾವಾಗಿ

ಅಂಗೀಕರಿಸಿದ್ದರು. ಆದರೆ ಆ ವ್ಯವಸ್ಥೆಯು ಸ್ವಾಮಿಗಳಿಗೆ ಸುಖಕರವಾ
ಲಿಲ್ಲ. ಅದರಿಂದ ಸ್ವಾಮಿಗಳು ಬೇನೆಬಿದ್ದರು. ಆಗ ಅವರು ತಮ್ಮ ಶಿಷ್ಯ
ನಾದ ನಾರಾಯಣಸ್ವಾಮಿಯನ್ನು ಕರೆಸಿಕೊಂಡರು. ಆ ಮೇಲೆ ಸ್ವಲ್ಪ ದಿವ
ಸಗಳಲ್ಲಿ ಸ್ವಾಮಿಗಳ ಬೇನೆಯು ಸ್ವಲ್ಪ ನೆಟ್ಟಗಾಯಿತು. ಆದರೂ ಅವರ
ಅಶಕ್ತಿಯು ದಿನೇ ದಿನೇ ಹೆಚ್ಚಾಗಹತ್ತಿತು. ಸ್ವತಃ ನಾರಾಯಣಸ್ವಾಮಿಯು
ಬೇನೆಬಿದ್ದನು. ಇದೆಲ್ಲ ಆಗಲಿಕ್ಕೆ ಟೇಹರಿಯ ಮಹಾರಾಜರ ಕಡೆಯಿಂದ
ಬರುವ ಅನ್ನವು ಮತ್ತು ಆಶ್ರಮದ ಕೆಟ್ಟ ಹವೆಯು ಕಾರಣವಿರುತ್ತದೆಂದು
ನಾರಾಯಣಸ್ವಾಮಿಯು ಸ್ವಾಮಿಗಳಿಗೆ ಸೂಚಿಸಲಾಗಿ ಸ್ವಾಮಿಗಳು ಆಶ್ರಮ
ವನ್ನು ಬಿಟ್ಟು ಅಲ್ಲಿಂದ ಎರಡು ಮೂರು ಹರದಾರಿ ದೂರ ಇರಲಿಕ್ಕೆ ಹೋ
ದರು. ಸ್ವಾಮಿಗಳಿಂದ ಸ್ವಲ್ಪ ಅಂತರದ ಮೇಲೆ ನಾರಾಯಣಸ್ವಾಮಿಯು
ಇರಲಿಕ್ಕೆ ಹೋಗಿ ನೆರೆಹೊರೆಯ ಹಳ್ಳಿಗಳಲ್ಲಿ ಭಿಕ್ಷೆಯನ್ನು ಬೇಡಿಕೊಂಡು
ಬಂದು ತನ್ನ ಊಟದ ವ್ಯವಸ್ಥೆಯನ್ನು ಮಾಡಿಕೊಳ್ಳಲಿಕ್ಕೆ ಹತ್ತಿದನು. ಆದರೆ
ಸ್ವಾಮಿಗಳು ಮಾತ್ರ ಟೇಹರಿಯ ಮಹಾರಾಜರ ಕಡೆಯಿಂದ ಬಂದ ಅನ್ನ
ವನ್ನೇ ಊಟ ಮಾಡುತ್ತಿದ್ದರು. ಇದರಿಂದ ಸ್ವಾಮಿಗಳ ಶರೀರವು ಮುಂಚಿ
ನಕಿಂತ ಅಶಕ್ತವಾಗಹತ್ತಿತು. ಆಗ ಅವರು ಅನ್ನ ಉಣ್ಣುವದನ್ನು ಬಿಟ್ಟು
ಬರೀ ಹಾಲಿನ ಮೇಲೆ ಇರಹತ್ತಿದರು. ಇದರಿಂದ ಅವರ ಪ್ರಕೃತಿಯು
ಸ್ವಲ್ಪ ಸುಧಾರಿಸಿತು. ಆದರೂ ಅವರು ಹೆಚ್ಚೆಚ್ಚು ಸೊರಗಹತ್ತಿದರು. ಈ
ಮೇರೆಗೆ ಸ್ವಾಮಿಗಳು ಎರಡು ವರ್ಷಗಳಲ್ಲಿ ಅನೇಕ ಸಾರೆ ಬೇನೆಬಿದ್ದುದರಿಂದ
ಅವರಿಗೆ ಸ್ವಲ್ಪ ಮಾನಸಿಕ ವ್ಯಥೆಯಾಯಿತು.

ಈ ವೇಳೆಯಲ್ಲಿ ಸ್ವಾಮಿಗಳ ಒಬ್ಬ ಶಿಷ್ಯನಾದ ಪೂರಣಸಿಂಹಜಿ, ಪಂಡಿತ
ಜಗತರಾಮ ಮತ್ತು ಹರಿಶರ್ಮ ಈ ಮೂವ್ವರು ಸ್ವಾಮಿಗಳ ದರ್ಶನಕ್ಕೆ
ಬಂದರು. ಸ್ವಾಮಿಗಳು ಈ ಮೂರೂ ಮಂದಿ ಅತಿಥಿಗಳ ಸತ್ಕಾರವನ್ನು
ಚನ್ನಾಗಿ ಮಾಡಿದರು. ಆದರೆ ಈ ಅತಿಥಿಗಳು ಸ್ವಾಮಿಗಳಿಗೆ—"ನೀವು ಅನ್ನ
ಗ್ರಹಣ ಮಾಡಿದ ಹೊರತಾಗಿ ನಾವು ಅನ್ನಗ್ರಹಣ ಮಾಡುವದಿಲ್ಲ" ಎಂದು
ಪ್ರೇಮಯುಕ್ತವಾದ ಹಟವನ್ನು ಹಿಡಿದರು. ಆಗ ಸ್ವಾಮಿಗಳು ಅವರನ್ನು
ಸಂತೋಷಪಡಿಸುವದಕ್ಕಾಗಿ ಪುನಃ ಅನ್ನವನ್ನು ಊಟ ಮಾಡಲಿಕ್ಕೆ ಹತ್ತಿ

ದರು. ಇದರಿಂದ ಸ್ವಾಮಿಗಳು ಪುನಃ ಬೇನೆಬಿದ್ದರು. ಇದನ್ನು ಆ ಮೂರೂ ಮಂದಿ ಅತಿಥಿಗಳು ನೋಡಿ ಸ್ವಾಮಿಗಳಿಗೆ ಅನ್ನಗ್ರಹಣ ಮಾಡಲಿಕ್ಕೆ ಹಟ ಮಾಡುವದನ್ನು ಬಿಟ್ಟರು. ಸ್ವಾಮಿಗಳ ತರುವಾಯ ಈ ಮೂರೂ ಜನರು ಜ್ವರ ಮತ್ತು ಬೈಲಕಡೆಯಉಪದ್ರವಗಳಿಂದ ಬೇನೆಬಿದ್ದರು. ಈ ಪ್ರಕಾರ ಎಲ್ಲರು ಬೇನೆಬಿದ್ದ ಕಾರಣ ಆ ಎಲ್ಲ ಜನರು ಆಶ್ರಮದಿಂದ ಇನ್ನೂ ಸ್ವಲ್ಪ ದೂರ ಇರಲಿಕ್ಕೆ ಹೋದರು. ಆ ಹೊತ್ತಿನವರೆಗೆ ನಾರಾಯಣಸ್ವಾಮಿಯು ಪ್ರತಿ ರವಿವಾರ ಸ್ವಾಮಿಗಳ ಕಡೆಗೆ ಬರುತ್ತಿದ್ದನು. ಆದರೆ ಪೂರ್ಣ ಸಿಂಹಜಿ ಯು ಬಂದಾಗಿನಿಂದ ಸ್ವಾಮಿಗಳ ಅಜ್ಞೆಯ ಮೂಲಕ ಅವನೂ ಇವರೆಲ್ಲರ ಗೂಡ ಇರಲಿಕ್ಕೆ ಹತ್ತಿದನು. ವಸಿಷ್ಠಾಶ್ರಮದಂಥ ಅತಿ ರಮಣೀಯ ಮತ್ತು ಪವಿತ್ರಸ್ಥಳವನ್ನು ನೋಡಿ ಯಾರ ಚಿತ್ತವಾದರೂ ಪ್ರಸನ್ನವಾಗುವದು ಸ್ವಾಭಾವಿಕವಿರುತ್ತದೆ. ಮೊದಲೇ ಶುದ್ಧ ವಾತಾವರಣವು! ಅದರಲ್ಲಿ ನೈಸ ರ್ಗಿಕ ರಮಣೀಯತ್ವವು! ಅಂದಬಳಿಕ ಸಂಸಾರದ ತಾಪದಿಂದ ಮುಕ್ತ ರಾಗಿ ಪರಮೇಶ್ವರನ ಧ್ಯಾನ ಮಾಡುತ್ತ ಕೂಡ್ರಬೇಕೆನ್ನುವವರಿಗೆ ಆ ಸ್ಥಳವು ಅತ್ಯಂತ ಉಪಯೋಗದ್ದೆಂದು ಹೇಳುವದೇ ಬೇಡ. ಅದರೊಳಗೆ ಸ್ವಾಮಿಗ ಳಂಥ ಸಾಧುಗಳ ದರ್ಶನದ ಮತ್ತು ಸತ್ಸಂಗತಿಯ ಲಾಭವು! ಇಷ್ಟೆಲ್ಲ ಇದ್ದಾ ಗ್ಯೂ ಹರಿಶರ್ಮನು ತನ್ನ ಮನೆಯ ಅನಾನುಕೂಲತೆಯ ಸಲುವಾಗಿ ಸ್ವಾಮಿ ಗಳ ಅಪ್ಪಣೆಯನ್ನು ಪಡೆದುಕೊಂಡು ತನ್ನ ಹೆಂಡರು ಮಕ್ಕಳಿದ್ದಲ್ಲಿಗೆ ಬೇಗನೆ ಹೊರಟು ಹೋದನು. ಸ್ವಾಮಿಗಳು, ಪೂರಣಜಿ ಮತ್ತು ಜಗತರಾಮ ಈ ಮೂರು ಮಂದಿ ಬೇನೆಬಿದ್ದು ಬಹಳ ದಣಿಕೊಂಡರು. ಆ ಬಳಿಕ ಪೂರಣಜಿ ಮತ್ತು ಜಗತರಾಮಜಿ ಇವರಿಬ್ಬರು ಸ್ವಾಮಿಗಳಿಗೆ—"ನೀವು ಇಲ್ಲಿಯ ಹವೆ ಯನ್ನು ಬಿಟ್ಟು ಟೇಹರಿಗೆ ಹೋದರೆ ನಿಮ್ಮ ಪ್ರಕೃತಿಯು ಸುಧಾರಿಸೀತು" ಎಂದು ಬಹಳ ಪರಿಯಿಂದ ಹೇಳಿದರು. ಅದಕ್ಕೆ ಸ್ವಾಮಿಗಳು ಒಪ್ಪಿಕೊಂಡು ತನ್ನ ಪುಸ್ತಕ ಮುಂತಾದ ಸಾಮಾನುಗಳನ್ನು ಟೇಹರಿಗೆ ಒಯ್ಯುವ ವ್ಯವಸ್ಥೆ ಯನ್ನು ಮಾಡಲಿಕ್ಕೆ ನಾರಾಯಣಸ್ವಾಮಿಗೆ ಅಪ್ಪಣೆಯನ್ನು ಮಾಡಿದರು. ಆಗ ನಾರಾಯಣಸ್ವಾಮಿಯು ಅದರಂತೆ ಮಾಡಲಿಕ್ಕೆ ಟೇಹರಿಗೆ ಹೊರಟು ಬಂದನು. ಪೂರಣಜಿಗೆ ಹೆಚ್ಚು ದಿವಸ ಅಲ್ಲಿ ಇರಲಿಕ್ಕೆ ಅನುಕೂಲವಿಲ್ಲದ್ದರಿಂದ

ಆವನು ಸಹ ಸ್ವಾಮಿಗಳ ಅಪ್ಪಣೆಯನ್ನು ಪಡೆದುಕೊಂಡು ಟೇಹರಿಗೆ ಬರಲಿಕ್ಕೆ ಹೊರಟನು. ಅವನನ್ನು ಕಳಿಸಲಿಕ್ಕೆ ಸ್ವಾಮಿಗಳು ಅರ್ಧ ಹರದಾರಿ ದೂರ ಹೋಗಿ ದಾರಿಯಲ್ಲಿ ಸ್ವಲ್ಪ ಮಂದ ಸ್ವರದಿಂದ-“ ಪೂರಣಾ, ರಾಮನು ಇನ್ನು ಮೇಲೆ ತೀವ್ರವಾಗಿ ಶಾಂತವಾಗುವನು! ರಾಮನು ಎಷ್ಟು ಅಶಕ್ತನಾಗಿರುವ ನೆಂಬುದನ್ನು ನೀನು ಪ್ರತ್ಯಕ್ಷ ನೋಡಿರುತ್ತೀ. ಅವನು ಇನ್ನುಮೇಲೆ ನಿನ್ನ ಕೂಡ ಮಾತಾಡುವದು, ನಡೆಯುವದು ಮತ್ತು ಪತ್ರವ್ಯವಹಾರ ಮಾಡುವದು ಸಹ ನಿಂತುಹೋಗಬಹುದು. ಆದುದರಿಂದ ನೀನೇ ಇನ್ನುಮುಂದೆ “ ರಾಮನು ” ಆಗಿ ಲೇಖನ, ವಾಚನ ಮತ್ತು ಯಾವತ್ತು ವ್ಯವಹಾರವನ್ನು ರಾಮಮಯ ವಾಗಿ ಮಾಡು! ”ಎಂದು ಹೇಳಿದರು. ಇದನ್ನು ಕೇಳಿ ಪೂರಣನ ಕಣ್ಣೊಳ ಗಿಂದ ಅಶ್ರುಗಳು ಸುರಿದವು. ಇದನ್ನು ನೋಡಿ ಸ್ವಾಮಿಗಳು ತತ್ಕಾಲವೇ ಅಲ್ಲಿಂದ ಹೊರಟುಹೋದರು. ಆದರಿಂದಂತೂ ಪೂರಣಜಿಯ ದುಃಖವು ಬಹಳ ಹೆಚ್ಚಾಗಲು ಅವನು ಹುಚ್ಚನಂತೆ ಹೇಗಾದರೂ ಕಾಲು ಹೆಜ್ಜೆಯನ್ನು ಚಲ್ಲುತ್ತ ದಾರಿಯನ್ನು ಸಾಗಿದನು. “ ರಾಮ ” ನದೂ ತನ್ನದೂ ಇದೇ ಕಡೆಯ ದರ್ಶ ನವೆಂದು ತಿಳಿದಿದ್ದರೆ ಅವನು ಕದಾಚಿತ್ ಅವರನ್ನು ಬಿಟ್ಟುಹೋಗುತ್ತಿದ್ದಿಲ್ಲ! ಅದಿರಲಿ.

ಸ್ವಾಮಿಗಳ ಪುಸ್ತಕ ಮೊದಲಾದ ಸಾಮಾನುಗಳನ್ನು ಟೇಹರಿಗೆ ತರಿಸಿ ಕೊಳ್ಳುವ ಯಾವತ್ತು ವ್ಯವಸ್ಥೆಯನ್ನು ಮಾಡಿ ನಾರಾಯಣಸ್ವಾಮಿಯು ವಸಿಷ್ಠಾಶ್ರಮಕ್ಕೆ ತಿರುಗಿ ಬಂದನು. ಆ ಬಳಿಕ ನಾರಾಯಣಸ್ವಾಮಿಯು ಅವುಗಳನ್ನೆಲ್ಲ ಸರಿಯಾಗಿ ಕಟ್ಟಿ ಕಳಿಸಿಕೊಟ್ಟು ಸ್ವಾಮಿಗಳನ್ನು ಕರಕೊಂಡು ಟೇಹರಿಗೆ ಬಂದ ನಂತರ ಅವರಿಬ್ಬರೂ ಮಹಾರಾಜರ ಸಿಮಲಾಸು ತೋಟ ದಲ್ಲಿ ೨ ವಾರಗಳ ಮಟ್ಟಿಗೆ ಇದ್ದರು. ಆ ಮೇಲೆ ಸ್ವಾಮಿಗಳ ಮನಸ್ಸಿನೊ ಳಗೆ ತಾವು ಯಾವತ್ತು ಋತುಗಳಲ್ಲಿ ಇರಲಿಕ್ಕೆ ಯೋಗ್ಯವಾಗುವಂಥ ಪವಿತ್ರ ಮತ್ತು ರಮ್ಯವಾದ ಸ್ಥಳಕ್ಕೆ ಹೋಗಬೇಕೆಂದು ವಿಚಾರವು ಬಂತು. ಆಗ ಅವರು ಅಲ್ಲಿಂದ ೨ ಹರದಾರಿ ದೂರವಿರುವಂಥ ಮಾಲೀ ದೇವಲ ಎಂಬ ಊರಿನ ನೆರೆಯಲ್ಲಿ ಗಂಗಾನದಿಯ ತೀರದ ಮೇಲಿನ ವಿಸ್ತೀರ್ಣ ಮೈದಾನದೊ ಳಗಿನ ಕೇಶವಾಶ್ರಮ ಎಂಬ ಹೆಸರುಳ್ಳ ಒಬ್ಬ ಸನ್ಯಾಸಿಯ ಆಶ್ರಮಕ್ಕೆ ಬಂದ

ಅಲ್ಲಿ ಟೇಹರಿಯ ಮಹಾರಾಜರ ಕಡೆಯಿಂದ ಒಂದು ಪರ್ಣಕುಟಿಯನ್ನು ಕಟ್ಟಿಸಿಕೊಂಡು ಆ ಪರ್ಣಕುಟಿಯೊಳಗೆ ಇರಹತ್ತಿದರು. ಅಲ್ಲಿ ಸುಮಾರು ಒಂದು ಹರದಾರಿಯ ಮೇಲೆ ಗೋದಿಸಿರಾಯಿ ಎಂಬ ಊರಿನ ಹತ್ತರವಿದ್ದ ಬಮರೋಗಿ ಎಂಬ ಒಂದು ಕಲ್ಲಿನ ಗುಹೆಯೊಳಗೆ ನಾರಾಯಣಸ್ವಾಮಿಯು ಇರಹತ್ತಿದನು.

ಸ್ವಾಮಿಗಳು ವಸಿಷ್ಠಾಶ್ರಮದಲ್ಲಿ ಇರಲಿಕ್ಕೆ ಬಂದಾಗಿನಿಂದ ತಮ್ಮ ಸಮಾಧಿಕಾಲದವರೆಗೆ ತಮ್ಮ ಏಕಾಂತವಾಸದಲ್ಲಿ ಹಿಂದೀ ಭಾಷೆಯೊಳಗೆ ಅನೇಕ ಕವಿತೆಗಳನ್ನು ರಚಿಸಿದರು. ಅವರು ಮೊದಲಿನಿಂದ ಕವಿಗಳೇ ಇದ್ದರು. ಅವರು ವಾನಪ್ರಸ್ಥಾಶ್ರಮದೊಳಗೆ ಇದ್ದಾಗ್ಗೆ ಮತ್ತು ಅಮರನಾಥ, ಗಂಗೋತ್ರಿ, ಯಮನೋತ್ರಿ, ಸುಮೇರು ಮುಂತಾದ ಯಾತ್ರೆಗಳನ್ನು ಮಾಡುತ್ತಿದ್ದಾಗ್ಗೆ ರಚಿಸಿದಂಥ ಕವಿತೆಗಳಿಗೂ ವಸಿಷ್ಠಾಶ್ರಮದಲ್ಲಿ ರಚಿಸಿದಂಥ ಕವಿತೆಗಳಿಗೂ ಮಹದಂತರವಿರುತ್ತದೆ. ಅವರು ವಸಿಷ್ಠಾಶ್ರಮದಲ್ಲಿದ್ದಾಗ ರಚಿಸಿದಂಥ ಕವಿತೆಗಳು ಹಿಂದೀ ಭಾಷೆಯೊಳಗಿನ ಭಕ್ತಿಪರವಾದ ಕವಿತೆಗಳಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದಿರುತ್ತದೆ.

## ನಾರಾಯಣ ಸ್ವಾಮಿಗೆ ಉಪದೇಶ.

ಈ ಪ್ರಕಾರ ಸ್ವಾಮಿಗಳು ಕೇಶವಾಶ್ರಮದಲ್ಲಿ ಪರ್ಣಕುಟಿಯನ್ನು ಕಟ್ಟಿಸಿಕೊಂಡು ಇರುತ್ತಿದ್ದಾಗ ಅವರ ಪಟ್ಟ ಶಿಷ್ಯನಾದ ನಾರಾಯಣಸ್ವಾಮಿಯು ಒಂದು ಸಾರೆ ಅವರ ದರ್ಶನಕ್ಕೆ ಒಂದು ಬಮರೋಗಿ ಗುಹೆಯ ಕಡೆಗೆ ಹೋಗುತ್ತಿದ್ದಾಗ್ಗೆ ಸ್ವಾಮಿಗಳು ಅವನಿಗೆ—“ನಾನು ಸ್ವಲ್ಪ ಹೊತ್ತು ಅಡ್ಡಾಡಲಿಕ್ಕೆ ಬರುತ್ತೇನೆ” ಎಂದು ಹೇಳಿ ಅವನ ಸಂಗಡ ಹೊರಟು ಸ್ವಲ್ಪ ದೂರ ಬಂದಮೇಲೆ ಅವನಿಗೆ—“ಮಗೂ, ಒಂದುವೇಳೆ ರಾಮನು ತೀವ್ರವಾಗಿ ಶಾಂತವಾಗುವನು. ರಾಮನ ಶರೀರವು ದಿನದಿನಕ್ಕೆ ನಿರ್ಬಲವೂ ಕೃಶವೂ ಆಗುತ್ತ ನಡೆದಿರುವದನ್ನು ನೀನು ನೋಡುತ್ತೀ. ರಾಮನಿಗೆ ಜಗತ್ತಿನ ಬೇಸರಿಕೆಯು ಬಂದಿರುತ್ತದೆ. ಅವನಿಗೆ ಏನೂ ಕೆಲಸ ಮಾಡುವ ಮನಸ್ಸು ಆಗಲೊಲ್ಲದು. ಬಹುಶಃ ಅವನ ಲೆಕ್ಕಣಿಕೆಯು ಬೇಗನೆ ವಿರಾಮವನ್ನು ತೆಗೆದು

(೯) ರಾಷ್ಟ್ರೀಯ ಐಕ್ಯದ ವಿಷಯದಲ್ಲಿ ನಮ್ಮ ದೇಶದ ಇತಿಹಾಸವು ಇತರ ದೇಶಗಳ ಇತಿಹಾಸಕ್ಕೆ ಅಪವಾದವಿರುವದಿಲ್ಲ. ಆದುದರಿಂದ ಸತ್ಯಕ್ಕಾಗಿ ಮತ್ತು ಸತ್ಯದ ಉದ್ಘಾಟನಕ್ಕಾಗಿ ಯಾವಾಗ್ಗೆ ಸಾವಿರಾರು ಶುದ್ಧಾಂತಃಕರಣದ ಜನರು ಆಹುತಿ ಬೀಳುವರೋ, ಯಾವಾಗ್ಗೆ ಲಕ್ಷಾವಧಿ ನಿರಪರಾಧಿ ಜನರನ್ನು ನಿರ್ದಯದಿಂದ ಗಲ್ಲಿಗೇರಿಸಿ ಅವರ ರಕ್ತವನ್ನು ಸೂರಿ ಮಾಡುವರೋ, ಆ ಕಾಲಕ್ಕೆ ರಾಷ್ಟ್ರೀಯ ಐಕ್ಯವು ಶಕ್ಯವಿರುತ್ತದೆ.

(೧೦) ರಾಷ್ಟ್ರೀಯ ಭಾವನೆಯ ಉದ್ದೀಪನವಾಗಬೇಕಾದರೆ ಪರಸ್ಪರರ ಮತವೈಶಿಷ್ಟ್ಯದ ಬಗ್ಗೆ ಬರೀ ಸಹಿಷ್ಣುತೆಯು ಸಾಕಾಗುವದಿಲ್ಲ; ಪರಸ್ಪರರೊಳಗೆ ಸಹಕಾರ್ಯವು ಬೇಕಾಗುತ್ತದೆ.

(೧೧) ರಾಷ್ಟ್ರೀಯ ಸಭೆಯ ಜನರೇ! ರಾಷ್ಟ್ರೀಯತ್ವದ ಸಲುವಾಗಿ ನಿಮ್ಮಲ್ಲಿಯ ಒಬ್ಬ ವ್ಯಾಖ್ಯಾತನು ಎರಡನೆಯವರ ನಿರ್ದಯದ ಮೂಲಕ ತನ್ನ ಜೀವಕ್ಕೆ ಎರವಾದರೆ ಅವನಿಂದ ನಿಮ್ಮೆಲ್ಲರ ಸಾವಿರಾರು ವ್ಯಾಖ್ಯಾನಗಳಿಗಿಂತ ಹೆಚ್ಚಿಗೆ ರಾಷ್ಟ್ರಕಾರ್ಯವು ಆಗುವದು.

(೧೨) ರಾಷ್ಟ್ರೀಯ ಐಕ್ಯವು ನಮ್ಮ ಸಾಂಪ್ರತದ ಆಪದ್ಧರ್ಮವಿರುತ್ತದೆ. ಆದುದರಿಂದ ಅದಕ್ಕೆ ಪ್ರತಿಬಂಧವಾಗುವಂಥ ಯಾವತ್ತು ಸ್ಥಾನಿಕ ಮತ್ತು ಸಂಕುಚಿತ ಧರ್ಮವನ್ನು ತ್ಯಾಗ ಮಾಡುವದು ಅವಶ್ಯವಿರುತ್ತದೆ.

(೧೩) ಪ್ರಿಯ ಹಿಂದವಾಸಿಯರೇ, ನೀವು ನಿಮ್ಮ ಮೃತ ತಾಯಿಗೆ ಶಾಂತಿಯು ಪ್ರಾಪ್ತವಾಗಬೇಕೆಂದು ಅವಳ ಶ್ರಾದ್ಧವನ್ನು (ಅವಿಧವಾ ನವಮಿಯನ್ನು) ಮಾಡುತ್ತೀರಿ. ಅದರಂತೆ ನೀವು ನಿಮ್ಮ ಆರ್ಯಮಾತೆಯ ಮುಕ್ತಿಯ ಸಲುವಾಗಿ ಸ್ವಾರ್ಥಸರ್ವಸ್ವದ ಶ್ರಾದ್ಧವನ್ನು ಮಾಡಬಾರದೇ?

(೧೪) ಶೈವರು ಶಿವನ ಪೂಜೆಯನ್ನು, ವೈಷ್ಣವರು ವಿಷ್ಣುವಿನ ಪೂಜೆಯನ್ನು, ಕ್ರೈಸ್ತರು ಕ್ರಿಸ್ತನ ಪೂಜೆಯನ್ನು, ಮುಸಲ್ಮಾನರು ಮಹಮ್ಮದನ ಪೂಜೆಯನ್ನು ಮಾಡುವಂತೆ ನಾನು ಬ್ರಾಹ್ಮಣ, ಪಾರ್ಶೀ, ಮುಸಲ್ಮಾನ, ಆರ್ಯ, ಬ್ರಹ್ಮೋ, ಶೀಖ ಇವರೆಲ್ಲರ ದ್ವಾರದಿಂದ ಭಾರತಮಾತೆಯ ಪೂಜೆಯನ್ನು ಮಾಡುತ್ತೇನೆ.

(೧೫) ಸ್ವದೇಶಕ್ಕಾಗಿ ತನ್ನ ಪ್ರಾಣವನ್ನು ಅರ್ಪಿಸುವವನೇ ನಿಜವಾದ ಕ್ಷತ್ರಿಯನು. ಕ್ಷಣಹೊತ್ತು ಸಹ ತನ್ನ ಕ್ಷುದ್ರವಾದ ವ್ಯಕ್ತಿತ್ವವನ್ನು ಲಕ್ಷದಲ್ಲಿ ತಾರದೆ ಸಾಮಾಜಿಕ ಹಿತಕ್ಕಾಗಿ ಅಥವಾ ದೇಶಹಿತಕ್ಕಾಗಿ ಹೋರಾಡುವವನೇ ನಿಜವಾದ ಬ್ರಾಹ್ಮಣನು.

(೧೬) ಹನ್ನೆರಡು ಮಂದಿ ದೇಶಭಕ್ತರ ಆಹುತಿಯಾದಾಗ್ಗೆ ಫ್ರಾನ್ಸ ದೇಶದ ಜನರು ಎಚ್ಚರಾದರು.

(೧೭) ಯಾರು ತಮ್ಮ ಸ್ವಾತಂತ್ರ್ಯವನ್ನು ಚಿನ್ನ ಬೆಳ್ಳಿಗಳಿಗೆ ಮಾರಿಕೊಂಡಿರುತ್ತಾರೋ, ಯಾರ ಉತ್ಸಾಹವನ್ನು ಸರಕಾರದವರು ಹೀರಿಕೊಂಡು ಬಿಟ್ಟಿರುತ್ತಾರೋ, ಯಾರ ಚೈತನ್ಯವೆಲ್ಲ ಕಾಗದ ಗೀಚುವಲ್ಲಿಯೇ ಹೋಗುತ್ತದೋ ಅಂಥವರಕೂಡ ನಿಮ್ಮ ವೇಳೆಯನ್ನು ಕಳೆಯಬೇಡಿರಿ. ಪರಕೀಯರು ಹಿಂದಿ ಹಿಪ್ಪಿಮಾಡಿದಂಥ ಎಲವುಗಳಿಂದ ನಿಮಗೇನು ಲಾಭವಾದೀತು?

(೧೮) ನಿಮ್ಮ ಶರೀರದೊಳಗಿನ ಯಾವತ್ತು ನರಗಳಿಂದ ಯಾವಾಗ್ಗೆ ರಾಷ್ಟ್ರೈಕ್ಯದ ರಕ್ತವು ಪ್ರವಹಿಸುವದೋ ಆಗ್ಗೆ ನಿಮಗೆ ಜೀವಾತ್ಮ ಮತ್ತು ಪರಮಾತ್ಮ ಇವರ ಐಕ್ಯದ ಆಸ್ವಾದವನ್ನು ತೆಗೆದುಕೊಳ್ಳಲಿಕ್ಕೆ ಅವಕಾಶವಾಗುವದು.

(೧೯) ವೈಯಕ್ತಿಕ ಧರ್ಮಕ್ಕೆ ರಾಷ್ಟ್ರೀಯ ಧರ್ಮಕ್ಕಿಂತ ಎಂದೂ ಹೆಚ್ಚಿಗೆ ಮಹತ್ವವನ್ನು ಕೊಡಬಾರದು.

(೨೦) ರಾಷ್ಟ್ರೀಯ ಹಿತವಾಗುವಂಥ ಕೃತ್ಯವನ್ನು ಮಾಡಿದರೆ ಪ್ರತ್ಯಕ್ಷ ಪರಮೇಶ್ವರನ ಆರಾಧನೆಯನ್ನು ಮಾಡಿದಂತೆ ಆಗುವದು.

(೨೧) ಸನ್ಯಾಸದ ಹೊರತಾಗಿ ಪರಮೇಶ್ವರನ ಪ್ರಾಪ್ತಿಯಾಗುವದಿಲ್ಲ. ಆದುದರಿಂದ ನೀವು ಸಂಪೂರ್ಣ ಸನ್ಯಾಸವನ್ನು (ತ್ಯಾಗವನ್ನು) ಮಾಡಿದ ಹೊರತಾಗಿ ಭಾರತಮಾತೆಯ ವಿಶಾಲ ಆತ್ಮದಕೂಡ ನಿಮ್ಮ ವೈಯಕ್ತಿಕ ಸಂಕುಚಿತ ಆತ್ಮದ ಐಕ್ಯವನ್ನು ಮಾಡಲಿಕ್ಕೆ ಆಗುವದಿಲ್ಲ.

(೨೨) ಪ್ರತಿ ಕ್ಷಣಕ್ಕೆ ಕೇವಲ ರಾಷ್ಟ್ರದ ಸಲುವಾಗಿ ಪ್ರಾಣವನ್ನು ಅರ್ಪಣ ಮಾಡುವ ಕ್ಷಾತ್ರ ವೃತ್ತಿಯು ಇದ್ದರೆ ಮಾತ್ರ ಶಾಶ್ವತ ಸುಖವು ಪ್ರಾಪ್ತಿಯಾಗುವದು.

(೨೩) ವೈಯಕ್ತಿಕ ಧನವು ರಾಷ್ಟ್ರದ ಧನವೆಂದು ತಿಳಿದು ನಡೆಯು ವದೇ ನಿಜವಾದ ವೈಶ್ಯವೃತ್ತಿಯು ಹಾಗೂ ಈ ಉದಾರ ವೃತ್ತಿಯಿಂದ ಪರ ಮಾತ್ಮ ಪ್ರಾಪ್ತಿಯು ನಿಜವಾಗಿ ಆಗುವದು.

(೨೪) ಐಹಿಕ ಮತ್ತು ಪಾರಮಾರ್ಥಿಕ ಸುಖವು ಪ್ರಾಪ್ತವಾಗುವ ಸಲುವಾಗಿ ಹಾಗೂ ಭಾವನಾತ್ಮಕ ಧರ್ಮಕ್ಕೆ ವ್ಯವಹಾರಿಕ ಧರ್ಮದ ಸ್ವರೂ ಪವು ಪ್ರಾಪ್ತವಾಗುವ ಸಲುವಾಗಿ ಶೂದ್ರವೃತ್ತಿಗೆ ಸನ್ಯಾಸವೃತ್ತಿಯನ್ನು ಸಂಪೂರ್ಣ ಐಕ್ಯಮಾಡಬೇಕು.

(೨೫) ರಾಷ್ಟ್ರಕ್ಕೆ ಅಂಟಿಕೊಂಡಿದ್ದ ಪಾರತಂತ್ರ್ಯವೆಂಬ ರೋಗವನ್ನು ನಿರ್ಮೂಲ ಮಾಡುವ ಸಲುವಾಗಿ ಸ್ವಾತಂತ್ರ್ಯವೆಂಬ ಆರೋಗ್ಯವನ್ನು ಪ್ರಾಪ್ತ ಮಾಡಿಕೊಳ್ಳುವದೊಂದೇ ಉಪಾಯವಿರುತ್ತದೆ. ನೈಸರ್ಗಿಕ ಕಾಯದೆಯ ಪ್ರಕಾರ ಮತ್ತು ನೈಸರ್ಗಿಕ ಧರ್ಮದ ಪ್ರಕಾರ ನಮ್ಮ ಜೀವನವನ್ನು ಇಟ್ಟು ಕೊಳ್ಳುವದೇ ಸ್ವಾತಂತ್ರ್ಯದ ಆರೋಗ್ಯವನ್ನು ಸಂಪಾದಿಸುವ ಮಾರ್ಗವು. ಇದೇ ಮಾರ್ಗದಿಂದ ಯಾವನೊಬ್ಬ ವ್ಯಕ್ತಿಗೆ ಸಾಧುತ್ವವುಂಟಾಗುವದು. ಕಿಂಬಹುನಾ ಅವನನ್ನು ಪರಮೇಶ್ವರನಾಗಿ ಮಾಡುವದು.

(೨೬) ಹಿಂದುಸ್ಥಾನದಲ್ಲಿ ಅಸಂಖ್ಯ ಶಕ್ತಿಗಳು ಕೆಲಸ ಮಾಡುತ್ತಿದ್ದ ರೂ ಭಾರತ ಮಾತೆಯ ಕಲ್ಯಾಣವು ಬಹುಶಃ ಶೂನ್ಯವೇ ಇರುತ್ತದೆ. ಇದಕ್ಕೆ ಪ್ರತಿಯೊಬ್ಬನು ಇನ್ನೊಬ್ಬನ ದೋಷಗಳನ್ನು ಅರಿಸುತ್ತ ಅವನ ವಿರುದ್ಧವಾಗಿ ಕೆಲಸಮಾಡುವಲ್ಲಿ ಆಸಕ್ತನಾಗಿರುವದೇ ಕಾರಣವು. ಇದು ಎಷ್ಟು ಖೇದ ವಾದದ್ದು?

(೨೭) ತಾಯಿಗೆ ಎಲ್ಲ ಮಕ್ಕಳು ಸರಿಯಾಗಿರುತ್ತಾರೆ. ಅವಳು ತನ್ನ ಮಕ್ಕಳೊಳಗೆ ಹಿರಿಕಿರಿಯರೆಂಬ ಭೇದವನ್ನು ಮಾಡುವದಿಲ್ಲ. ಅವಳು ಎಲ್ಲ ಮಕ್ಕಳ ಮೇಲೆ ಸಮವಾಗಿ ಪ್ರೀತಿಮಾಡುತ್ತಾಳೆ. ತಾಯಿಯ ಈ ಉದಾತ್ತ ಸ್ವಭಾವವನ್ನು ನೋಡಿ ನೀವು ನಿಮ್ಮ ಭೇದಭಾವವನ್ನು ಬಿಟ್ಟು ನಿಮ್ಮ ಮಾತೃಭೂಮಿಯ ಸೇವೆಯನ್ನು ಮಾಡಬೇಕು.

(೨೮) ನಾವು ನಮ್ಮ ದೇಶದೊಳಗಿನ ಪ್ರತಿಯೊಂದು ಊರಿಗೆ, ಪ್ರತಿ ಯೊಂದು ಗಿಡಕ್ಕೆ, ಪ್ರತಿಯೊಂದು ಕಲ್ಲಿಗೆ ಮತ್ತು ಪ್ರತಿಯೊಂದು ಪಶುವಿಗೆ

ಧಾರ್ಮಿಕ ಭಾವನೆಯಿಂದ ಪೂಜ್ಯವಾಗಿ ಎಣಿಸುತ್ತೇವೆ. ಅಂದಮೇಲೆ ನಾವು ನಮ್ಮ ಮಾತೃಭೂಮಿಗೆ ಉಪಾಸ್ಯ ದೇವತೆಯೆಂದು ತಿಳಿದು ಅದನ್ನು ಕಾಯಾ ವಾಚಾ ಮನಸ್ಸಿನಿಂದ ಆರಾಧಿಸಬೇಕಲ್ಲವೇ?

(೨೯) ಶುಭ್ರ ಮತ್ತು ಗಗನಚುಂಬಿತ ದೇವಾಲಯಗಳಿಂದ ಮತ್ತು ಪಾಷಾಣಮಯ ವಿಷ್ಣುವಿನಿಂದ ನಿಮ್ಮ ಅಂತಃಕರಣವು ಶಾಂತವಾಗಲಾರದು. ಆದರೆ ದೇಶದಲ್ಲಿಯ ಕ್ಷುಧಿತನಾದ ನಾರಾಯಣನನ್ನು ಮತ್ತು ಸೇವಾಕರ್ಮಿಯಾದ ವಿಷ್ಣುವಿನನ್ನು ಪೂಜಿಸಿದರೆ ನಿಮ್ಮ ಅಂತಃಕರಣವು ನಿಜವಾಗಿ ಶಾಂತವಾಗುವದು.

(೩೦) ಯಜ್ಞದ ಹೆಸರಿನಿಂದ ಕೃತ್ರಿಮವಾದ ಅಗ್ನಿಯ ಬಾಯೊಳಗೆ ಮೌಲ್ಯವುಳ್ಳ ತುಪ್ಪವನ್ನು ತೆರಪಿಲ್ಲದೆ ಸುರವುವದಕ್ಕಿಂತ ಕ್ಷುಧಾಪೀಡಿತರಾದ ಲಕ್ಷಾವಧಿ ಜೀವಂತ ನಾರಾಯಣರಿಗೆ ಒಂದು ಒಣ ಭಕ್ಕರಿ (ರೊಟ್ಟಿ) ಯನ್ನು ಕೊಡುವದು ಹೆಚ್ಚು ಪುಣ್ಯವಲ್ಲವೇ?

(೩೧) ನಮ್ಮ ದೇಶದೊಳಗಿನ ಪ್ರತಿಯೊಂದು ಮನೆಯು ರಾಷ್ಟ್ರದೊಳಗಿನ ವಿಶಿಷ್ಟ ಪರಿಸ್ಥಿತಿಯ ನಿದರ್ಶಕವಾದ ಪ್ರತಿಮೆಯು ಇರುತ್ತದೆ.

(೩೨) ಇಲ್ಲಿ ಕೆಲಸ ಮಾಡುವ ಕೈಗಳು ಸ್ವಲ್ಪವಿದ್ದು ತಿನ್ನುಣ್ಣುವ ಬಾಯಿಗಳು ಬಹಳವಿರುತ್ತವೆ. ಇಷ್ಟೇ ಅಲ್ಲ, ವ್ಯರ್ಥವಾದ ಮತ್ತು ಅಹಿತಕಾರಕ ಉತ್ಸವಗಳಲ್ಲಿ ಹಣವನ್ನು ನಿರರ್ಥಕವಾಗಿ ಹಾಳುಮಾಡಿಸುವ ವ್ಯಕ್ತಿಗಳು ವಿಶೇಷವಿರುತ್ತವೆ.!!

(೩೩) ನಮ್ಮ ಏತದ್ದೇಶಿಯ ಅರಸರು, ಸಂಸ್ಥಾನಿಕರು, ಸರದಾರರು ಮತ್ತು ಇನಾಮದಾರರು ವಿಪುಲವಾದ ದ್ರವ್ಯದ ಮತ್ತು ಅಧಿಕಾರದ ಒಡೆಯರು ಇರದೆ ಜೊಳ್ಳು ಹೆಸರುಗಳನ್ನು ಮತ್ತು ಪೊಳ್ಳು ಉದ್ದುದ್ದ ಪದವಿಗಳನ್ನು ಧಾರಣ ಮಾಡಿ ಮನೆಯಲ್ಲಿ ಪೌರುಷದ ಕಥೆಗಳನ್ನು ಹೇಳುವ ಶೂರ ಸಿಪಾಯರಿರುತ್ತಾರೆ.

(೩೪) ಇಂಗ್ಲಂಡದಲ್ಲಿ ಒಂದು ಕಾಳು ಸಹ ಬೆಳೆಯುವದಿಲ್ಲ. ಹೀಗಿದ್ದರೂ ಆ ದೇಶವು ಶ್ರೀಮಂತವಿರುವ ಕಾರಣವೇನು? ಅಲ್ಲಿಯ ಪರ್ಜನ್ಯಕಾರಿ

ಯಾದ ಇಂದ್ರನಿಗೆ (ಕೆಲಸ ಮಾಡುವ ದೇವರಿಗೆ) ಕಲಾಕೌಶಲ್ಯದ ಮತ್ತು ಉದ್ಯೋಗ ವ್ಯವಸಾಯಗಳ ಪೌಷ್ಟಿಕ ಅನ್ನವು ತೇಗು ಬರುವತನಕ ತಿನ್ನಲಿಕ್ಕೆ ಸಿಗುವದೇ ಅದರ ಕಾರಣವು!

(೩೫) ಸತ್ತವರ ಎಲುವು ಮುಟ್ಟುವದಕ್ಕೆ ಸಹ ಹೆದರುವದು ಮತ್ತು ಅವಿಚಾರದಿಂದ ಹೊಲಸು ತಿಳಿದುಕೊಳ್ಳುವ ವಸ್ತುಗಳನ್ನು ಕಂಡು ಮೂಗು ಮುಚ್ಚಿಕೊಳ್ಳುವದು ನಮ್ಮ ದೇಶದ ದಾರಿದ್ರ್ಯದ ನಿಜವಾದ ಕಾರಣಗಳಿರುತ್ತವೆ.

(೩೬) ಭಾರತದ ಗತವೈಭವವನ್ನು ಚರ್ವಿತಚರ್ವಣ ಮಾಡುವದೇ ದೇಶಾಭಿಮಾನವೆಂದು ತಿಳಿದುಕೊಳ್ಳುವವರಲ್ಲಿ ಏನೂ ಹುರಳು ಇರುವದಿಲ್ಲವೆಂದು ತಿಳಿಯಬೇಕು.

(೩೭) ಒಮ್ಮೆ ನೀವು ವ್ಯಕ್ತಿತ್ವವನ್ನು ಬಿಟ್ಟುಕೊಟ್ಟು ರಾಷ್ಟ್ರದ ಕಡೆಗೆ ವಿಶಾಲಬುದ್ಧಿಯಿಂದ ನೋಡಲಿಕ್ಕೆ ಹತ್ತಿದರೆ ನಿಮ್ಮಲ್ಲಿ ದೇಶಾಭಿಮಾನವು ಹುಟ್ಟುವದು. ಆ ಬಳಿಕ ನೀವು ಏನು ಮಾಡಿದಾಗ್ಯೂ ನಿಮಗೆ ರಾಷ್ಟ್ರದ ಬೆಂಬಲವು ದೊರಕುವದು.

(೩೮) ಮುಂದಾಳುಗಳಾಗಲಿಕ್ಕೆ ಯೋಗ್ಯರು ಯಾರು? ಯಾರು ತಮಗೆ ಸಹಾಯ ಮಾಡುವವರ ಮೂರ್ಖತನದ ಬಗ್ಗೆ, ತಮ್ಮ ಅನುಯಾಯಿಗಳ ಅವಿಶ್ವಾಸದ ಬಗ್ಗೆ, ಮಾನವೀ ಸಮಾಜದ ಕೃತಘ್ನತೆಯ ಬಗ್ಗೆ, ಮತ್ತು ಬಹುಜನ ಸಮಾಜದ ಅಜ್ಞಾನದ ಅಥವಾ ಅನಭಿಜ್ಞತೆಯ ಬಗ್ಗೆ ಎಂದೂ ಗುಣಗುಟ್ಟುವದಿಲ್ಲವೋ ಅವರೇ ಮುಂದಾಳುಗಳಾಗಲಿಕ್ಕೆ ಯೋಗ್ಯರು.

(೩೯) ಕ್ಷುದ್ರ ವಿಚಾರದ ದೊಡ್ಡ ಮನುಷ್ಯರಿಗಿಂತ ಉಚ್ಚ ವಿಚಾರದ ಸಣ್ಣ ಮನುಷ್ಯರಿಂದ ದೇಶದ ಕಲ್ಯಾಣವು ಹೆಚ್ಚಾಗಿ ಆಗುವದು.

(೪೦) ಪ್ರತಿಯೊಬ್ಬನಿಗೆ ಅವನ ಯೋಗ್ಯತೆಯನ್ನು ಪರೀಕ್ಷಿಸಿಕೊಳ್ಳಲಿಕ್ಕೆ ಯೋಗ್ಯ ಅವಕಾಶವನ್ನು ಕೊಡಿರಿ. ಯಾವ ಅಶಕ್ತ ಮನುಷ್ಯನಾದರೂ ತನ್ನ ತಲೆಯನ್ನು ಮೇಲಕ್ಕೆ ಎತ್ತರಿಸಬೇಕಾದರೆ ತನ್ನ ಕಾಲನ್ನು ತನ್ನ ಭುಜದ ಮೇಲೆ ಅಥವಾ ಕುತ್ತಿಗೆಯ ಮೇಲೆ ಇಟ್ಟುಕೊಳ್ಳದೆ ಅದನ್ನು ತಾನು ನಿಂತ ಭೂಮಿಯಮೇಲೆಯೇ ಊರುವನು.

(೪೧) ಸ್ವಾತಂತ್ರ್ಯ ಮತ್ತು ಪ್ರೇಮ ಇವುಗಳ ಜೀವಂತ ಜ್ಯೋತಿಯು ಸಾಮರ್ಥ್ಯದ ರಹಸ್ಯವಿರುವದು. ಇವುಗಳಿಲ್ಲದೆ ರಾಷ್ಟ್ರದ ಉದಯವನ್ನು ಮಾಡಬೇಕೆಂದು ಕೆಲವು ನಾಮಧಾರೀ ಮುತ್ಸದ್ದಿಗಳು ವಿಚಾರಮಾಡುವದು ವ್ಯರ್ಥವಿರುತ್ತದೆ.

(೪೨) ಪರಕೀಯ ರಾಜಕಾರಣದ ಬಲಿಯೊಳಗಿಂದ ಸ್ವದೇಶವನ್ನು ಬಿಡಿಸಬೇಕಾದರೆ ಭಾರತ ದೇಶದೊಳಗಿನ ಪ್ರತಿಯೊಬ್ಬ ಮನುಷ್ಯನು ತನ್ನಂತೆ ಎರಡನೆಯವನನ್ನು ತಿಳಿದು ಅವನ ಮೇಲೆ ಪ್ರೇಮ ಮಾಡಬೇಕು.

(೪೩) ಯಾವನ ಸಾರ್ವಜನಿಕ ವರ್ತನದಿಂದ ದೇಶಕ್ಕೆ ಲಾಭವಿರುತ್ತದೋ ಅಂಥವನ ಸ್ವಂತ ವರ್ತನವು ಪವಿತ್ರವಿರುವದಿಲ್ಲವೆಂದು ಅಥವಾ ಶುದ್ಧವಿರುವದಿಲ್ಲವೆಂದು ವ್ಯರ್ಥವಾಗಿ ಕೂಗುವದರಿಂದ ಉಪಯೋಗವೇನು?

(೪೪) ನಮ್ಮ ದೇಶಬಾಂಧವರಲ್ಲಿ ಬಂಧುಭಾವ, ಸಮಾನತ್ವ, ಸರಳತನ, ಗುಣಗೌರವ ಇವುಗಳ ಜಾಗ್ರತಿಯನ್ನು ಮಾಡಬೇಕಲ್ಲದೆ ಟೀಕಾವೃತ್ತಿಯನ್ನು ಜಾಗ್ರತಮಾಡಬಾರದು.

(೪೫) ರಾಷ್ಟ್ರದಲ್ಲಿ ಕಲಹ ಮಾಡುವವರ ಸಂಖ್ಯೆಯು ಹೆಚ್ಚಾದ ಕೂಡಲೆ ದೇಶಭಕ್ತರ ಸುಗ್ಗಿಯು ಬಂತೆಂದು ತಿಳಿಯಬೇಕು.

(೪೬) ಯಾವ ದೇಶದಲ್ಲಿ ಧರ್ಮವು ಮತ್ತು ಧರ್ಮಸ್ವರೂಪೀ ಈಶ್ವರನ ಹೆಸರು ಪ್ರಚಾರದಲ್ಲಿರುತ್ತದೋ ಆ ದೇಶದಲ್ಲಿ ಜಗತ್ತಿನೊಳಗಿನ ಯಾವತ್ತು ಉತ್ತಮೋತ್ತಮ ಪದಾರ್ಥಗಳು ಮತ್ತು ಉತ್ತಮೋತ್ತಮ ಯೋಗ್ಯತೆಯು ಸಹಜವಾಗಿ ಪ್ರಾಪ್ತವಾಗುತ್ತವೆ.

(೪೭) ಪರದೇಶದೊಳಗಿನ ಜನರು ಭಾರತವರ್ಷದೊಳಗಿನ ವಿದ್ಯೆಯನ್ನು ಅಭ್ಯಾಸಮಾಡಿ ತಮ್ಮ ಉನ್ನತಿಯನ್ನು ಮಾಡಿಕೊಳ್ಳುತ್ತಿರುವಾಗ ನಾವು ಭಾರತ ನಿವಾಸಿಗಳು ಆ ವಿದ್ಯೆಯನ್ನು ಅಭ್ಯಾಸ ಮಾಡದೆ ಜಡ ಮೂಢರಾಗಿ ಇರುವದು ಅತ್ಯಂತ ದುಃಖದ ಸಂಗತಿಯಲ್ಲವೇ?

(೪೮) 'ಯಜ್ಞದಿಂದ ಅರಿಷ್ಟವು ನಿವಾರಣವಾಗುತ್ತದೆ' ಎಂಬ ನಿಯಮವು ವೇದಕಾಲದಲ್ಲಿ ಸತ್ಯವಿರುವಷ್ಟೇ ಈಗಿನ ಕಾಲದಲ್ಲಿಯೂ ಸತ್ಯವಿರು

ತ್ತದೆ. ಮೊದಲಿನ ಕಾಲದಲ್ಲಿ ಬಡ ಆಡುಗಳನ್ನು ಬಲಿಕೊಡುತ್ತಿದ್ದರು. ಈಗ ನೀವು ಪಕ್ಷಾಭಿಮಾನ, ಜಾತಿದ್ವೇಷ, ಈರ್ಷೆ, ಅಸೂಯ ಮುಂತಾದ ಮನೋವಿಕಾರಗಳನ್ನು ಪ್ರೇಮದ ಯಜ್ಞಕುಂಡದಲ್ಲಿ ಬಲಿಕೊಡಬೇಕಾಗುತ್ತದೆ. ಈ ಪ್ರಕಾರ ನೀವು ಮಾಡಿದರೆ ನಿಮಗೆ ಈ ಜಗತ್ತಿನಲ್ಲಿ ಸ್ವರ್ಗಸುಖವು ಪ್ರಾಪ್ತವಾಗುತ್ತದೆ.

(೪೯) ನೀವು ಪರದೇಶಕ್ಕೆ ಹೋಗಿ ನಿಮ್ಮ ಹೊಟ್ಟೆ ಹೊರಕೊಳ್ಳುವ ಹೊರತಾಗಿ ಎರಡನೆ ಯಾವ ಕೆಲಸವನ್ನು ಮಾಡದಿದ್ದರೂ ಚಿಂತಿಲ್ಲ. ಅಲ್ಲಿಯೇ ನೀವು ಇದ್ದುಕೊಳ್ಳಿರಿ. ಆದರೆ ನೀವು ದುಃಖಪೀಡಿತಳಾದ ಭಾರತ ಮಾತೆಯ ಎದೆಯಮೇಲೆ ವಿಷಕಾರಕವಾದ ಮುಳ್ಳು ಕಂಟಿಯಾಗಿ ಇರಬೇಕಾಗಿದ್ದರೆ ನೀವು ಭಾರತ ಮಾತೆಗೆ ನಿಮ್ಮ ಮೋರೆಯನ್ನು ತಿರುಗಿ ತೋರಿಸುವದಕ್ಕಿಂತ ಅರಬಸ್ಥಾನದ ಸಮುದ್ರದಲ್ಲಿ ಜೀವ ಕೊಡುವದು ಒಳ್ಳೇದು! ನೀವು ಅಲ್ಲಿಯ ಅತಿಥಿ ಸತ್ಕಾರವನ್ನು ಒಮ್ಮೆಯಾದರೂ ಪರೀಕ್ಷಿಸುವದಕ್ಕೆ ಹೋಗುವದರಲ್ಲಿ ಕೆಡಕೇನದೆ?

(೫೦) ವರ್ಣದ್ವೇಷ ಮತ್ತು ಜಾತಿದ್ವೇಷ ಇವುಗಳ ಬೆಂಕಿಯು ನಮ್ಮ ದೇಶದಲ್ಲಿ ಹೊತ್ತುತ್ತಿರುವದರಿಂದ ನಮ್ಮ ಜನರ ಅಂತಃಕರಣಗಳು ಒಂದಾಗುವದು ಬಹಳ ಕಠಿಣವಿರುತ್ತದೆ. ಇಂಥ ಸ್ಥಿತಿಯಲ್ಲಿ ಬುದ್ಧಿವಾದ ಮತ್ತು ತರ್ಕವಾದಗಳಿಂದ ಐಕ್ಯ ಮಾಡುವ ಪ್ರಯತ್ನವು ವ್ಯರ್ಥವೇ ಸರಿ.

(೫೧) ರಾಷ್ಟ್ರೀಯ ಬಂಧುಭಾವನೆಯನ್ನು ಜಾಗ್ರತಪಡಿಸುವ ಸಲುವಾಗಿ ನೀವು ಜಾತಿಯ ನಿರ್ಬಂಧಗಳನ್ನು ಸ್ವಲ್ಪ ಸಡಿಲುಮಾಡಬೇಕೆಂತಲೂ, ತೀಕ್ಷ್ಣವಾದ ವರ್ಣಭೇದವನ್ನು ಬಂಧುಭಾವನೆಯಕಿಂತ ಗೌಣವೆಂದು ಎಣಿಸಬೇಕೆಂತಲೂ ಭಾರತಧರ್ಮವು ಅಪೇಕ್ಷಿಸುತ್ತದೆ.

(೫೨) ಭಾರತ ವರ್ಷವು “ ಮೊದಲಿಗೆ ಹೀಗಿತ್ತು, ಹಾಗಿತ್ತು ” ಎಂದು ವಿಚಾರ ಮಾಡುವಲ್ಲಿ ಕಾಲಕಳೆಯುವದಕ್ಕಿಂತ ಅದು “ ಮುಂದೆ ಹೀಗೆ ಆದೀತು ” ಎಂದು ಅನುಭವಪಡೆದುಕೊಳ್ಳುವದಕ್ಕಾಗಿ ಟೊಂಕಕಟ್ಟಿಕೊಂಡು ಕೆಲಸ ಮಾಡಲಿಕ್ಕೆ ಏಳಿರಿ.

(೫೩) ಸ್ತ್ರೀಯರ, ಹುಡುಗರ ಮತ್ತು ಬಹುಜನಸಮಾಜದ ಶಿಕ್ಷಣದ ಕಡೆಗೆ ಅಲಕ್ಷ್ಯ ಮಾಡಿದರೆ ರಾಷ್ಟ್ರೀಯ ವೃಕ್ಷಕ್ಕೆ ಆಧಾರವಾಗಿರುವ ಟೊಂಗೆಗಳನ್ನು ಕೊಯ್ದು ತೆಗೆದು ಅದರ ಬೇರುಗಳ ಮೇಲೆ ಕೊಡ್ಲಿಯ ಪೆಟ್ಟು ಹಾಕಿದಂತೆ ಆಗುವದು.

(೫೪) ಸ್ತ್ರೀಯರು, ಹುಡುಗರು ಮತ್ತು ಬಹುಜನಸಮಾಜವು ರಾಷ್ಟ್ರದ ಬೊಡ್ಡಿ ಮತ್ತು ಬೇರುಗಳಂತೆ ಇರುತ್ತಾರೆ. ಅವುಗಳ ಕಡೆಗೆ ಅಲಕ್ಷ್ಯ ಮಾಡಿದರೆ ರಾಷ್ಟ್ರವೆಂಬ ಗಿಡವು ಪೂರಾ ಒಣಗಿ ಹೋಗುವದು.

(೫೫) ನಿಮ್ಮ ವ್ಯಕ್ತಿತ್ವವು ಶ್ರೀಮಂತರ ಮುಖಾಂತರ ದೊಡ್ಡದಾದರೂ ಸದ್ಯದ ಪ್ರಗತಿಯು ಬಡವರ ಮುಖಾಂತರವೇ ಆಗುವದೆಂಬುದನ್ನು ಮರೆಯಬೇಡಿರಿ.

(೫೬) ಬಡವರನ್ನು ಆದರ ಮಾಡಿ ಕರೆದು ಮಾತಾಡಿಸಿರಿ. ಶ್ರೀಮಂತರು ಇದ್ದಲ್ಲಿಯೇ ಇರಲಿ. ಅವರು 'ಅಲ್ಪ ಪ್ರತಿಕಾರದ ಮಾರ್ಗದಿಂದಲೇ ನಿಮ್ಮ ಕಡೆಗೆ ಬರಲಿ.

(೫೭) ಪರದಾಸ್ಯತ್ವವು ಬೇಡಾಗಿದ್ದರೆ ಸ್ವದಾಸ್ಯತ್ವ (ಆತ್ಮಸಂಯಮನ) ವನ್ನು ಮಾಡಲಿಕ್ಕೆ ಸಿದ್ಧರಾಗಿರಿ.

(೫೮) ಭಾರತ ಮಾತೆಯು ಪಾರ್ಶೀ, ಕ್ರಿಶ್ಚನ್ ಮೊದಲಾದ ಪರಸ್ಥಳಗಳಿಂದ ಬಂದ ಜನರಿಗೆ ಸಹ ಆಶ್ರಯವನ್ನು ಕೊಟ್ಟಿದ್ದು ತನ್ನ ಹೊಟ್ಟೆಯ ಮಕ್ಕಳಿಗೆ ಒಂದು ರೊಟ್ಟಿಯ ತುಣಕು ಸಹ ಕೊಡಲಿಕ್ಕೆ ಅಸಮರ್ಥಳಾಗಿರುತ್ತಾಳೆ. ಇದು ಎಷ್ಟು ಖೇದವಾದದ್ದು?

---

## ತ್ಯಾಗ.

(೫೯) ಮುಖದ ಮೇಲಿನ ಪ್ರಸನ್ನತೆಯು ಮತ್ತು ದಿವ್ಯ ತೇಜಸ್ಸು ತ್ಯಾಗವೃತ್ತಿಯ ಹೊರತಾಗಿ ಪ್ರಾಪ್ತವಾಗುವದಿಲ್ಲ.

(೬೦) ಬೇಡಿದರೆ ಅಥವಾ ಯಾಚನೆ ಮಾಡಿದರೆ ಯಾವ ವಸ್ತುವೂ ದೊರಕುವದಿಲ್ಲ. ಆದರೆ ನೀವು ಆಸಕ್ತಿಯನ್ನು ಬಿಟ್ಟುಕೊಟ್ಟು ಉದಾಸೀನತೆ

ಯಿಂದ ನಡೆದರೆ ರಾಜನು ಕರೆಕಳುಹಿಸದಿದ್ದರೂ ಅವನ ದರ್ಶನಕ್ಕೆ ಹೋಗುವದಕ್ಕಾಗಿ ಜನರು ತ್ವರೆಯನ್ನು ಮಾಡುವಂತೆ ಪ್ರತಿಯೊಂದು ವಸ್ತುವು ತಾನೇ ತ್ವರೆಯಿಂದ ಬರುವದು.

(೬೧) ದೃಢನಿಶ್ಚಯ ಮತ್ತು ತ್ಯಾಗಬುದ್ಧಿ ಇವುಗಳ ಹೊರತಾಗಿ ಎಷ್ಟು ಪ್ರಯತ್ನಮಾಡಿದರೂ ಮನುಷ್ಯನ ಆಶೆಯು ಕಡಿಯುವದಿಲ್ಲ.

(೬೨) ಈಶ್ವರಪ್ರೇಮ ಮತ್ತು ಈಶ್ವರಭಕ್ತಿ ಇವುಗಳು ನಮ್ಮಲ್ಲಿ ಒಂದ ಹೊರತಾಗಿ ತ್ಯಾಗಬುದ್ಧಿಯು ಬರುವದಿಲ್ಲ.

(೬೩) ನಿಷ್ಕಾಂಚನರಾಗಿರಿ; ಅಂದರೆ ನೀವು ಸಾರ್ವಭೌಮ ರಾಜರೇ ಆಗುವಿರಿ!

(೬೪) ಬೇಡುವದಕ್ಕಿಂತ ಕೊಡುವದು ಒಳ್ಳೇ ಮತ್ತು ಸುಲಭವಾದ ಕ್ರಿಯೆಯು.

(೬೫) ತ್ಯಾಗದ ಹೊರತಾಗಿ ಆತ್ಮಜ್ಞಾನವು ಬರುವದಿಲ್ಲ.

(೬೬) ಸೂರ್ಯನಂತೆ ಆಗಿರಿ; ಚಂದ್ರನಂತೆ ಆಗಬೇಡಿರಿ. ಯಾಕಂದರೆ ತ್ಯಾಗವು ಸೂರ್ಯನ ಜೀವವಿರುತ್ತದೆ. ಆದುದರಿಂದ ಸೂರ್ಯನು ಗ್ರಹಮಾಲಿಕೆಯೊಳಗೆ ಕೇಂದ್ರಸ್ಥಾನದಲ್ಲಿರುತ್ತಾನೆ.

(೬೭) ಅರ್ಜುನನು ತನ್ನ ಕುದುರೆಯ ಕಡಿವಾಣಗಳನ್ನು ಭಗವಾನ್ ಶ್ರೀಕೃಷ್ಣನ ಸ್ವಾಧೀನಕ್ಕೆ ಪೂರ್ಣವಾಗಿ ಒಪ್ಪಿಸಿದ್ದನು. ಇದೇ ನಿಜವಾದ ವೇದಾಂತಿಯ ಜೀವಿತದ ಮಾರ್ಗವಿರುತ್ತದೆ.

(೬೮) ಪಾವಿತ್ರ್ಯವು ಅಂದರೆ ಶುದ್ಧತೆಯು ತ್ಯಾಗಭಾವನೆಯಿಂದ ಉಂಟಾಗುವ ಕಾರಣ ಪಾವಿತ್ರ್ಯದ ಅಂದರೆ ಶುದ್ಧತೆಯ ಅರವು ಇರುವವನಿಗೆ ಆನಂದವು ಮತ್ತು ನೈತಿಕ ಬಲವು ಹುಟ್ಟುತ್ತವೆ.

(೬೯) ಜೇನನೊಣವು ತನ್ನ ಕಾಲಿಗೆ ಹತ್ತಿದ ಜೇನತುಪ್ಪವನ್ನು ಹೊರಗೆ ನಿಶ್ಚಯಪೂರ್ವಕವಾಗಿ ಒಂದೊಂದೇ ಹನಿ ತೆಗೆದು ಬಿಟ್ಟು ಸ್ವತಂತ್ರವಾಗುವಂತೆ ನಾವು ಸ್ವಂತ ದೇಹದ ಮೇಲಿನ ಮತ್ತು ಜಗತ್ತಿನಲ್ಲಿಯ ವಸ್ತು

ಗಳ ಮೇಲಿನ ಲೋಭವನ್ನು ಕಡಿಮೆಮಾಡಲಿಕ್ಕೆ ಪ್ರಯತ್ನ ಮಾಡಿದರೆ ನಮಗೆ ಮಾನಸಿಕ ಸ್ವತಂತ್ರತೆಯು ದೊರಕುವದು.

(೨೦) ಪರಮೇಶ್ವರನ ಕರ್ಮಚಕ್ರವು ಯಾವಾಗಲು ತಿರಗುತ್ತಲೇ ಇರುವದು. ಅದಕ್ಕೆ ದಯಮಾಯೆಗಳು ಏನೂ ಗೊತ್ತಿಲ್ಲ. ಅದನ್ನು ಹಿಡಿದು ಅಡ್ಡಿಮಾಡುವವನು ಅದರ ಬಾಯೊಳಗೆ ಸಿಕ್ಕು ಪುಡಿ ಪುಡಿಯಾಗಿ ಹೋಗುವನು. ಆದರೆ ಅದರಂತೆ ನಡೆಯುವವನು ತಾನೇ ಅದರ ಚಾಲಕನಾಗುವನು.

(೨೧) ಈ ಕರ್ಮಚಕ್ರವನ್ನು, ಅಂದರೆ ಪರಮೇಶ್ವರನ ಕಾಯದೆಯನ್ನು ತಿಳಕೊಂಡು ನಡೆಯುವದಕ್ಕೆ ಹಿಂದೂ ಜನರು ಜ್ಞಾನವೆಂದು ಅನ್ನುವರು. ಹಾಗಿದ್ದಲ್ಲಿ ಜ್ಞಾನ ಮತ್ತು ತ್ಯಾಗ ಇವೆರಡೂ ಭಿನ್ನ ವಸ್ತುಗಳು ಇರುವದಿಲ್ಲ.

(೨೨) ಆತ್ಮಜ್ಞಾನ, ಸತ್ಯ ಮೊದಲಾದ ಶಬ್ದಗಳು ತ್ಯಾಗದ ಪರ್ಯಾಯದ ಶಬ್ದಗಳಿರುತ್ತವೆ. ಈ ಜ್ಞಾನವನ್ನು ಸಂಪಾದಿಸಿ ಅದನ್ನು ಆಚರಣದಲ್ಲಿ ತರುವವನೇ ತ್ಯಾಗಿಯು ಅಥವಾ ಸನ್ಯಾಸಿಯು.

(೨೩) ಸಂಕುಚಿತ ಅಹಂಭಾವವನ್ನು ಬಿಟ್ಟ ಹೊರತಾಗಿ ಅಂದರೆ ಸ್ವಾರ್ಥತ್ಯಾಗವನ್ನು ಮಾಡಿದ ಹೊರತಾಗಿ ಯಾವದೂ ನಿಜವಾದ ಕಾರ್ಯವು ಆಗುವದಿಲ್ಲ. ಅಹಂಭಾವವು ಅಲ್ಪವಿದ್ವಾಗ್ಯೂ ಕಾರ್ಯವು ನಾಶವನ್ನು ಹೊಂದುವದು.

(೨೪) ಸಮಾಜದಿಂದ ದೂರಿರುವವನಿಗೇ ಮಾತ್ರ ತ್ಯಾಗಿ ಅಥವಾ ಸನ್ಯಾಸಿಯೆನ್ನುವದಿಲ್ಲ. ಸಮಾಜದಲ್ಲಿದ್ದರೂ ಪ್ರತ್ಯೇಕ ಒಂದು ವಸ್ತುವಿನ ಲೋಭವನ್ನು ಮತ್ತು ತನ್ನ ಸ್ವಂತ ದೇಹದ ಮೇಲಿನ ಮಮತೆಯನ್ನು ಅಥವಾ ಅಭಿಮಾನವನ್ನು ಬಿಟ್ಟು ನಡೆಯುವವನಿಗೆ ತ್ಯಾಗಿ ಅಥವಾ ಸನ್ಯಾಸಿಯೆಂದು ಅನ್ನತಕ್ಕದ್ದು.

(೨೫) ವ್ಯವಹಾರವನ್ನು ಮಾಡುವಾಗ ತ್ಯಾಗವೃತ್ತಿಯಿಂದ ಹೇಗೆ ಇರಬೇಕೆಂಬುದನ್ನು ತಿಳಕೊಂಡು ನಡೆಯುವವನಿಗೆ ಚಿಂತೆ, ತಾಪ, ಭಯ ಮುಂತಾದ ಮಾನಸಿಕ ವಿಕಾರಗಳು ತಟ್ಟುವದಿಲ್ಲ. 'ಸರ್ವ ಭೂತಗಳಲ್ಲಿ ನಾನೇ ಇರುತ್ತೇನೆ. ಎಲ್ಲವು ನನ್ನ ಸ್ವರೂಪವೇ ಇರುತ್ತದೆ' ಎಂಬ ವಿಚಾರವನ್ನು

ಯಾವಾಗಲು ತನ್ನ ದೃಷ್ಟಿಯು ಮುಂದೆ ಇಟ್ಟುಕೊಂಡು ನಡೆಯುವದೇ ವ್ಯವಹಾರಿಕ ತ್ಯಾಗವು.

(೭೬) 'ನನಗೆ ಕೆಲವು ಕರ್ತವ್ಯಗಳನ್ನು ಮಾಡತಕ್ಕದ್ದಿರುತ್ತದೆ. ನನ್ನ ಮೇಲೆ ಒಂದು ವಿಶಿಷ್ಟವಾದ ಹೊಣೆಯುಂಟು' ಎಂದು ತಿಳಕೊಂಡು ಅದರ ಆಸಕ್ತಿಯಲ್ಲಿ ಇರುವದೇ ಬದ್ಧತೆಯು. ಆದರೆ ಸಮಾಜ ಮತ್ತು ರಾಷ್ಟ್ರಗಳ ಬಂಧನಗಳಿಂದ ಬದ್ಧನಿರದೆ ಇರುವ 'ನಾನು' ಆತ್ಮವಿರುತ್ತೇನೆ. ನಾನು ಆತ್ಮವಿದ್ದೇನೆಂಬ ತಿಳುವಳಿಕೆಗೆ ವೇದಾಂತದ ಭಾಷೆಯಲ್ಲಿ 'ತ್ಯಾಗ' ವೆಂದು ಅನ್ನುತ್ತಾರೆ.

(೭೭) ತ್ಯಾಗದ ಆರಂಭವು ಮನೆಯಿಂದಲೇ ಆಗತಕ್ಕದ್ದು. 'ನಾನು ಇಂಥ ಕಾರ್ಯವನ್ನು ಮಾಡುತ್ತಿದ್ದೇನೆ' 'ಇಂಥ ಕಾರ್ಯವು ನನ್ನಿಂದಲೇ ಆಯಿತು' 'ನಾನು ಇಂಥಾದ್ದೊಂದು ವಸ್ತುವಿನ ಉಪಭೋಗವನ್ನು ತೆಗೆದುಕೊಳ್ಳುತ್ತೇನೆ' ಎಂಬ ವೃಥಾಭಿಮಾನವನ್ನು ಮನಸ್ಸಿನಿಂದ ಬಿಡುವದೇ ವೈರಾಗ್ಯವು.

(೭೮) ವಿದ್ಯಾರ್ಜನದ ಸಲುವಾಗಿ ವಿಶ್ವವಿದ್ಯಾಲಯದ ಪ್ರವೇಶವು ಒಂದು ಮಾರ್ಗವಿರುವಂತೆ ಮುಕ್ತಿಯ ಸಲುವಾಗಿ ಅರಣ್ಯವಾಸವು ಒಂದು ಮಾರ್ಗವಿರುತ್ತದೆ.

(೭೯) ಅರಣ್ಯಕ್ಕೆ ಹೋಗಿ ಉಗ್ರವಾದ ತಪಶ್ಚರ್ಯ ಮಾಡಿ ಇಷ್ಟಯೋಗವನ್ನು ಪ್ರಾಪ್ತಮಾಡಿಕೊಳ್ಳುವದು ಏನೂ ಅಗತ್ಯವಿಲ್ಲ. ಕರ್ತವ್ಯದಲ್ಲಿ ನಿಮಗ್ನವಾಗುವದು ಮತ್ತು ಮೂರ್ತಿಮಂತ ಕರ್ಮಯೋಗಿಯಾಗುವದು ಇವೇ ಮಹಾಯೋಗಗಳಿರುತ್ತವೆ.

(೮೦) ತ್ಯಾಗಿಯಾಗುವದಕ್ಕಾಗಿ ಅರಣ್ಯಕ್ಕೆ ಹೋಗುವ ಅಗತ್ಯವಿಲ್ಲ.

(೮೧) ಪ್ರಶ್ನೆ—ಮಕ್ಕಳು ಎಲ್ಲರ ಪ್ರೇಮಕ್ಕೂ ಸ್ತುತಿಗೂ ಏಕೆ ಪಾತ್ರರಾಗುತ್ತಾರೆ?

ಉತ್ತರ—ಅವರಿಗೆ ಅವೆರಡೂ ಬೇಡಾಗಿರುತ್ತವೆಂದು.

(೮೨) ಸ್ವಾರ್ಥತ್ಯಾಗಿಯೇ ನಿಜವಾದ ಸುಖಿಯು.

---

# ಪ್ರೇಮ ಮತ್ತು ಭಕ್ತಿ.

(೮೩) ನಮ್ಮ ನೆರೆಹೊರೆಯ ಜನರ ಅಥವಾ ನಮಗೆ ಹತ್ತಿಹೊಂದಿದ ಜನರ ಸಂಗಡ ಐಕ್ಯವನ್ನು ಮತ್ತು ಆತ್ಮೀಯತ್ವವನ್ನು ಅನುಭವಿಸುವದಕ್ಕೆ ಪ್ರೇಮವೆಂಬ ಹೆಸರು.

(೮೪) ಪ್ರೇಮವೇ ಒಂದು ಸತ್ಯ ಕಾಯದೆಯು ಇರುತ್ತದೆ. ಉಳಿದ ಯಾವತ್ತು ಕಾಯದೆಗಳು ಸಂಘಟಿತ ಮತ್ತು ವ್ಯವಸ್ಥಿತ ಕಳವೆಂದರೂ ಅಡ್ಡಿಯಿಲ್ಲ. ಕಾಯದೆಭಂಗದ ಅಧಿಕಾರವು ಬರೀ ಪ್ರೇಮಕ್ಕೆ ಇರುತ್ತದೆ.

(೮೫) ಜೀವನಾರ್ಥ ಕಲಹದಲ್ಲಿ ಪ್ರೇಮವೇ ಜಯವನ್ನು ಹೊಂದುತ್ತದೆ.

(೮೬) ಪ್ರೇಮವು ದಿವ್ಯ ಪ್ರಾಣಜ್ಯೋತಿಯು ಇರುತ್ತದೆ.

(೮೭) ಪ್ರೇಮಕ್ಕೆ ಸಣ್ಣದೊಡ್ಡ ಜನರ, ಉಚ್ಚನೀಚ ಜನರ ಮತ್ತು ಬಡಶ್ರೀಮಂತ ಜನರ ಭೇದಾಭೇದವಿರುವದಿಲ್ಲ.

(೮೮) ಪ್ರೇಮವನ್ನು ಎಂದೂ ಮಾಡದೆ ಇರುವವನಿಗೆ ಈಶ್ವರನ ಜ್ಞಾನವು ಆಗಲಾರದು.

(೮೯) ಪರಮೇಶ್ವರನು ಪ್ರೇಮರೂಪನು ಇರುತ್ತಾನೆ. ಆದುದರಿಂದ ಕೃತ್ರಿಮಪ್ರೇಮ ಮಾಡುವದರಿಂದ ಪರಮೇಶ್ವರನ ಅಪಮಾನಮಾಡಿದಂತಾಗುವದು.

(೯೦) ಜೊಳ್ಳು ಕೊಚ್ಚುವವರ, ಡಾಂಭಿಕತನವನ್ನು ಮಾಡುವವರ, ಇಲ್ಲವೆ ಕೃತ್ರಿಮ ಮತ್ತು ನಿರ್ಲಜ್ಜ ಸಭ್ಯತೆಯ ಗುಲಾಮರ ಕೂಡ ಒಡನಾಟ ಮಾಡುವದಕ್ಕಿಂತಲೂ ಹೆಚ್ಚಿಗೆ ಗಂಡಾಂತರವಾದ್ದು ಯಾವದೂ ಇಲ್ಲ. ನಿಜವಾದ ಪ್ರೇಮವು ಅಥವಾ ಭಕ್ತಿಯು ವಾಸವಾಗಿರುವಂಥ ಸ್ಥಳದ ನೆರಳಿಗೆ ಸಹ ಸುಳ್ಳುಗಾರರು ಅಥವಾ ಮೋಸಗಾರರು ನಿಂತುಕೊಳ್ಳಲಾರರು.

(೯೧) ಮೊದಲಿಗೆ ನಿಮ್ಮ ಅಂತಃಕರಣವನ್ನು ಸ್ವಾಧೀನಪಡಿಸಿಕೊಳ್ಳಿರಿ. ಆಮೇಲೆ ಬುದ್ಧಿವಾದವನ್ನು ಹೇಳಿರಿ. ಯಾಕಂದರೆ ಬುದ್ಧಿವಾದವು ನಿರಾಶೆಯಾದ ಪ್ರಸಂಗದಲ್ಲಿ ಪ್ರೇಮವು ಕಾರ್ಯಭಾಗವನ್ನು ಮಾಡುವದು.

ಸೂರ್ಯನ ಮತ್ತು ವಾಯುವಿನ ಜಗಳದಲ್ಲಿ ಸೂರ್ಯನಿಗೆ (ಉಷ್ಣತೆಗೆ, ಪ್ರೇಮಕ್ಕೆ) ಜಯವು ಆದದ್ದನ್ನೂ, ವಾಯುವಿಗೆ (ಚಳಿಗೆ) ಅಪಜಯವಾದದ್ದನ್ನೂ ಲಕ್ಷ್ಯದಲ್ಲಿಟ್ಟುಕೊಳ್ಳಿರಿ.

(೯೨) ಯಾವದರ ಯೋಗದಿಂದ ಬದ್ಧತೆಯು ಬೆಳೆದು, ದಾಸ್ಯತ್ವವು ಬಂದು, ಭೋಗಭಾವನೆಯ ಸಂಕುಚಿತ ವೃತ್ತಿಯು ಬೆಳೆಯುತ್ತದೋ ಅದಕ್ಕೆ ಕಾಮುಕತೆಯು ಅಥವಾ ಮೋಹವು ಎಂಬ ಹೆಸರು.

(೯೩) 'ಪ್ರೇಮವನ್ನು ಕೊಡಿರಿ. ಮತ್ತು ಪ್ರೇಮವನ್ನು ತೆಗೆದುಕೊಳ್ಳಿರಿ' ಎಂಬ ದೈವಿಕ ನಿಯಮವನ್ನು ಚನ್ನಾಗಿ ತಿಳಿದುಕೊಂಡು ನಡೆಯಿರಿ. ಪ್ರೇಮವು ಜೀವನದ ಯಶಸ್ಸಿನ ತತ್ವವಿರುತ್ತದೆಂದು ಚನ್ನಾಗಿ ಲಕ್ಷ್ಯದಲ್ಲಿಟ್ಟುಕೊಳ್ಳಿರಿ.

(೯೪) ಸತ್ಯಪ್ರೇಮದಿಂದ ತುಂಬಿಹೋದ ಅಂತಃಕರಣವುಳ್ಳವನು ಯಾವದೂ ಕಲೆಯಲ್ಲಿ ಪ್ರವೀಣನಿಲ್ಲದಿದ್ದಾಗ್ಯೂ ಸ್ವಲ್ಪಾದರೂ ದೇಶ ಸೇವೆಯನ್ನು ಮಾಡಲು ಸಮರ್ಥನಾಗುತ್ತಾನೆ.

(೯೫) ಪ್ರೇಮವು ಅಪ್ಪಣೆಮಾಡಿ ದೊರಕಿಸುವಂಥ ವಸ್ತುವಲ್ಲ.

---

# ಧರ್ಮ ಮತ್ತು ನೀತಿ.

(೯೬) ನಾವು ನಮ್ಮ ಉಗಮಸ್ಥಾನಕ್ಕೆ ಹೋಗಿ ಮುಟ್ಟುವ ಸಾಧನವೇ ಧರ್ಮವು.

(೯೭) ದೇವರ ಮೇಲಿನ ವಿಶ್ವಾಸಕ್ಕಿಂತ ಸತ್ಯದ ಮೇಲಿನ ವಿಶ್ವಾಸಕ್ಕೆ ಧರ್ಮವೆನ್ನುವದು ಹೆಚ್ಚು ಒಳ್ಳೇದು.

(೯೮) ಆತ್ಮಸ್ವರೂಪವನ್ನು ಸ್ಪಷ್ಟವಾಗಿ ತಿಳಕೊಳ್ಳುವ ಪ್ರಯತ್ನವೇ ಧರ್ಮವು.

(೯೯) ಪುರಾತನತ್ವವು ಸತ್ಯದ ಅಥವಾ ನಿಜವಾದ ಧರ್ಮದ ಪ್ರಮಾಣವಲ್ಲ. ಯಾಕಂದರೆ ಹಳೇ ಮನೆಗಳನ್ನು ಕೆಲಕೆಲವು ಸಾರೆ ಕೆಡವಬೇಕಾಗುತ್ತದೆ. ಅಥವಾ ಹಳೇ ಅರಿವೆಗಳನ್ನು ಬದಲಿಸಬೇಕಾಗುತ್ತದೆ.

(೧೦೦) ಇದರಂತೆ ಆಧುನಿಕತ್ವವಾದರೂ ಧರ್ಮದ ಪ್ರಮಾಣವಲ್ಲ. ಯಾಕಂದರೆ ಅದನ್ನು ಕಾಲದ ಒರೆಗಲ್ಲಿಗೆ ಹಚ್ಚಿ ಅದರ ಅನುಭವವನ್ನು ತೆಗೆದುಕೊಂಡ ಹೊರತಾಗಿ ಅದರ ನಿಜವಾದ ಪರೀಕ್ಷೆಯಾಗುವದಿಲ್ಲ.

(೧೦೧) ಯಾವದೊಂದಕ್ಕೆ ಅನುಯಾಯಿಗಳು ಬಹಳ ಮಂದಿ ಇರುತ್ತಾರೆಂಬ ಕಾರಣದಿಂದ ಅದಕ್ಕೆ ಧರ್ಮದ ಪ್ರಮಾಣವು ಬರುವದಿಲ್ಲ. ಯಾಕಂದರೆ ಬಹುಜನ ಸಮಾಜವು ಅಜ್ಞಾನವಿರುವದು. ಹಾಗೂ ಅದು ಬಹುಶಃ ಅಸತ್ಯದ ಮೇಲೆಯೇ ವಿಶ್ವಾಸವನ್ನು ಇಡುವದು.

(೧೦೨) ನಾಲ್ಕು ಮಂದಿ ಬುದ್ಧಿವಂತರು ವಿಶ್ವಾಸವಿಡುವದಾದರೂ ಧರ್ಮದ ಪ್ರಮಾಣವೆಂದು ತಿಳಿಯಬಾರದು. ಯಾಕಂದರೆ ಒಮ್ಮೊಮ್ಮೆ ಬುದ್ಧಿವಂತರಿಗೆ ಸ್ವತಃ ಅಜ್ಞಾನವು ಮುಸುಕಿಕೊಳ್ಳುವದು.

(೧೦೩) ಒಬ್ಬ ದೊಡ್ಡ ಸನ್ಯಾಸಿಯು ಒಂದು ವಿಶಿಷ್ಟ ಧರ್ಮದ ಪ್ರವರ್ತಕನಿರುತ್ತಾನೆಂಬ ಕಾರಣದಿಂದ ಅವನ ಅಭಿಪ್ರಾಯವನ್ನೇ ಧರ್ಮದ ಪ್ರಮಾಣವೆಂದು ತಿಳಿದುಕೊಳ್ಳಬಾರದು. ಯಾಕಂದರೆ ಕೆಲಕೆಲವು ಸಾರೆ ದೊಡ್ಡ ದೊಡ್ಡ ವಿರಕ್ತರಿಗೆ ಸತ್ಯವು ಗೊತ್ತಿರುವದಿಲ್ಲ. ಅವರು ಶುದ್ಧ ದುರಾಗ್ರಹಿ ಹುಚ್ಚರು ಇರುವರು.

(೧೦೪) ಅರಸರು ಮತ್ತು ಮಾಂಡಲೀಕರು ವಿಶ್ವಾಸವಿಡುವದಾದರೂ ಧರ್ಮದ ಪ್ರಮಾಣವೆಂದು ತಿಳಿಯಬಾರದು. ಯಾಕಂದರೆ ಅವರು ಬಹುಶಃ ಆಧ್ಯಾತ್ಮಿಕ ದೃಷ್ಟಿಯಿಂದ ತೀರಾ ದರಿದ್ರರಿರುವರು.

(೧೦೫) ದೊಡ್ಡ ಪ್ರಖ್ಯಾತ ಮನುಷ್ಯನ ಪ್ರಚಾರಕತ್ವವಾದರೂ ಧರ್ಮದ ಪ್ರಮಾಣವಿರುತ್ತದೆಂದು ಯಾರೂ ತಿಳಿಯಬಾರದು. ಯಾಕಂದರೆ ನ್ಯೂಟನ್ನನಂಥ ದೊಡ್ಡ ಪ್ರಖ್ಯಾತ ಮನುಷ್ಯನು ಶೋಧಿಸಿ ತೆಗೆದ ಪ್ರಕಾಶದ ಉತ್ಪತ್ತಿಯ ಕಲ್ಪನೆಯು ತಪ್ಪೆಂದು ನಿರ್ಣಯವಾಯಿತು !!

(೧೦೬) ಅತಿ ಶ್ರೇಷ್ಠ ಮತ್ತು ಚಾರಿತ್ರ್ಯವುಳ್ಳ ವ್ಯಕ್ತಿಯು ಹೇಳುವ ಸಂಗತಿಯು ಧರ್ಮ ಪ್ರಮಾಣವೆಂದು ತಿಳಿಯಬಾರದು. ಯಾಕಂದರೆ ಸತ್ಯ ಶೋಧನೆಯ ಕೆಲಸದಲ್ಲಿ ದೊಡ್ಡ ದೊಡ್ಡ ಚರಿತ್ರ ಪುರುಷರು ಅನೇಕ ಸಾರೆ

ಪೂರ್ಣವಾಗಿ ತಪ್ಪುತ್ತಾರೆ. ಒಬ್ಬ ಮನುಷ್ಯನ ಗ್ರಾಹಕ ಮತ್ತು ವಾಚಕ ಶಕ್ತಿಯು ದೊಡ್ಡದಿದ್ದರೂ ಅವನಿಗೆ ಪಚನಕ್ರಿಯೆಯ ತಿಳುವಳಿಕೆಯು ಏನೂ ಇರುವದಿಲ್ಲ. ಇದರಂತೆ ಒಬ್ಬ ಅತ್ಯುತ್ತಮ ಮತ್ತು ಸುಂದರ ಚಿತ್ರವನ್ನು ರೇಖಿಸಿದ ಚಿತ್ರಗಾರನು ಸುಂದರನಿರುವದಿಲ್ಲ. ಅವನು ಅನೇಕ ಸಾರೆ ಕುರೂಪಿಯು ಇರುತ್ತಿರುವದು ನಿದರ್ಶನಕ್ಕೆ ಬರುತ್ತದೆ.

(೧೦೭) ತ್ರಿಕಾಲದಲ್ಲಿಯೂ ಅಬಾಧಿತವಾದ ಸತ್ಯದ ಒರೆಗಲ್ಲು ನಿಜವಾದ ಧರ್ಮಪ್ರಮಾಣವಿರುತ್ತದೆ. ನೀವು ಸ್ವತಃ ಯಾವದೊಂದು ಮಾತನ್ನು ಈ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿ ಅದನ್ನು ಪ್ರಮಾಣವೆಂದು ನಂಬಿರಿ.

(೧೦೮) ಒಂದು ಧರ್ಮಪಂಥವನ್ನು ಬಿಟ್ಟು ಇನ್ನೊಂದು ಧರ್ಮಪಂಥಕ್ಕೆ ಹೋಗುವದರಿಂದ ಏನೂ ಲಾಭವಿಲ್ಲ. ಈ ಹೊತ್ತು ರಾಮದಾಸ ಪಂಥದಲ್ಲಿದ್ದವರು ನಾಳೆ ಬ್ರಹ್ಮೋಪಂಥಕ್ಕೆ ಹೋದರೆ, ಅಥವಾ ಆರ್ಯ ಸಮಾಜದ ಪಂಥದಲ್ಲಿದ್ದವರು ರಾಮದಾಸ ಸಾಂಪ್ರದಾಯುಕ್ಕೆ ಹೋದರೆ, ಅಥವಾ ಕೃಷ್ಣನ ಉಪಾಸನೆಯನ್ನು ಮಾಡುವವರು ಕ್ರಿಸ್ತನ ಅಥವಾ ಮಹಮ್ಮದ ಪೈಗಂಬರನ ಉಪಾಸನೆಯನ್ನು ಮಾಡಿದರೆ ಇಂಥ ಚಂಚಲವೃತ್ತಿಯಿಂದ ಲಾಭವಾಗುವದರ ಬದಲಾಗಿ ಹಾನಿಯು ತಪ್ಪದೆ ಆಗುವದು.

(೧೦೯) ಪದವಿ, ಸಂಪತ್ತಿ, ವಿದ್ಯಾ, ನಾಮರೂಪ, ವ್ಯಕ್ತಿವಿಶಿಷ್ಟತ್ವ ಇವುಗಳ ಬಗ್ಗೆ ಆದರ ಮಾಡುವದು ಒಂದು ತರದ ಮೂರ್ತಿಪೂಜೆಯು ಇರುತ್ತದೆ.

(೧೧೦) ಜಗತ್ತಿನೊಳಗಿನ ಸಾಧು ಸತ್ಪುರುಷರು ಅಥವಾ ಬುದ್ಧ, ಕೃಷ್ಣ, ಕ್ರಿಸ್ತ ಮೊದಲಾದ ಮಹಾತ್ಮರು ನಿನ್ನನ್ನು ಉದ್ಧಾರ ಮಾಡುತ್ತಾರೆಂದು ಪರಾವಲಂಬಿಯಾಗಿ ಕೂಡ್ರಬೇಡ. ನೀನು ಮುಕ್ತನು ಮತ್ತು ಸ್ವತಃ ಮುಕ್ತಿದಾಯಕನು ಇರುತ್ತೀ.

(೧೧೧) ಬ್ರಹ್ಮವಿದ್ಯೆಯ ಮೇಲೆ ಎಲ್ಲರದೂ ಸಮಾನ ಅಧಿಕಾರವಿರುತ್ತದೆ.

(೧೧೨) ಉಪವಾಸವು ಪರಮೇಶ್ವರನ ಕಡೆಗೆ ಹೋಗುವ ಒಂದು ಸಾಧನವಿರುತ್ತದೆ.

(೧೧೩) ಯಜ್ಞದಿಂದ ಸಂಕಟಗಳು ತಪ್ಪಿ ಹೋಗಿ ಸ್ವರ್ಗ ಪ್ರಾಪ್ತಿಯಾಗುತ್ತದೆಂದು ಅನ್ನುವದು ನಿಜವಾದದ್ದು. ಪ್ರಸ್ತುತ ಕಾಲಕ್ಕೆ ಪಕ್ಷಭೇದ, ವರ್ಣಭೇದ ಮೊದಲಾದ ಸಂಕಟಗಳನ್ನು ಪ್ರೇಮರೂಪೀ ಯಜ್ಞದ ಹವನ ಕುಂಡದಲ್ಲಿ ಆಹುತಿಯಾಗಿ ಕೊಟ್ಟರೆ ನಿಮಗೆ ಇಹಲೋಕದಲ್ಲಿಯೇ ಸ್ವರ್ಗ ಪ್ರಾಪ್ತಿಯಾಗುವದು.

(೧೧೪) ವೈಯಕ್ತಿಕ ಶಕ್ತಿಯನ್ನು ಜಗತ್ತಿನ ಶಕ್ತಿಯಲ್ಲಿ ಸಮರ್ಪಣ ಮಾಡುವದು ದೇವಯಜ್ಞವಿರುತ್ತದೆ.

(೧೧೫) ಯಾವತ್ತು ಪ್ರಾಣಿಗಳ ನೇತ್ರಗಳಲ್ಲಿ ಸೂರ್ಯನು ಇರುತ್ತಾನೆಂದು ತಿಳಿದುಕೊಳ್ಳುವದು, ಯಾವತ್ತು ಮನುಷ್ಯರ ಅಥವಾ ಮನುಷ್ಯೇತರರ ನೇತ್ರಗಳ ಬಗ್ಗೆ ಸೂರ್ಯನಂತೆ ಆದರಮಾಡುವದು ಇವೇ ಸೂರ್ಯನಿಗೆ ನಿಜವಾದ ಅರ್ಘ್ಯವನ್ನು ಕೊಡುವ ರೀತಿಯು. ಇದೇ ನಿಜವಾದ ಆದಿತ್ಯ ಯಜ್ಞವಿರುತ್ತದೆ.

(೧೧೬) ರಾಷ್ಟ್ರೀಯ ಹಿತದ ಸಲುವಾಗಿ ಸೇವೆಯನ್ನು ಮಾಡುವದು ನಿಜವಾದ ಇಂದ್ರ ಯಜ್ಞವಿರುತ್ತದೆ.

(೧೧೭) ದೇಶದ ಆಕಾರವು ಬದಲಾಗುತ್ತದೆ; ನದಿಗಳ ಪಾತ್ರವು ಬದಲಾಗುತ್ತದೆ; ಭಾಷೆಯು ಬದಲಾಗುತ್ತದೆ; ಮತ್ತು ವರ್ಣವು ಬದಲಾಗುತ್ತದೆ. ಈ ಪ್ರಕಾರ ಪ್ರತಿಯೊಂದು ವಸ್ತುವು ಬದಲಾಗುತ್ತಿರುವಾಗ ವೇದ ಕಾಲದ ದೇವತೆಗಳು ಏಕೆ ಬದಲಾಗಬಾರದು?

(೧೧೮) ಈಗಿನ ಕಾಲವು ಬದಲಾಗಿರುತ್ತದೆ. ಜನರಿಗೆ ರಾಜಶಾಸನದ ಬೇಸರಿಕೆಯು ಬಂದಿರುತ್ತಿದ್ದು ಪ್ರಜಾಶಾಸನದ ಮೇಲೆ ಪ್ರೀತಿಯು ಹುಟ್ಟಿರುತ್ತದೆ. ಅವರಿಗೆ ಸ್ವತಂತ್ರವು ಬೇಕು; ಸ್ವರಾಜ್ಯವು ಬೇಕು. ಈ ಪ್ರಕಾರ ವಸ್ತುಸ್ಥಿತಿಯು ಇರುವಾಗ ದೇವಾ, ನಾನು ಪತಿತನಿರುತ್ತೇನೆ, ಪಾಪಿಯು ಇರುತ್ತೇನೆ. ನನ್ನನ್ನು ಪಾವನ ಮಾಡು ಹಾಗೂ ನನಗೆ ನನ್ನ ಜೀರ್ಣ ಭಾವನೆಯನ್ನು ಬಿಟ್ಟುಕೊಟ್ಟು 'ಅಹಂ ಬ್ರಹ್ಮಸ್ಮಿ' ಎಂಬ ಹೊಸ ಭಾವನೆಯ ಪ್ರೀತಿಯು ಉತ್ಪನ್ನವಾಗುವಂತೆ ಮಾಡಿ 'ಅಹಂ ಬ್ರಹ್ಮಸ್ಮಿ' ಯ ಸ್ವರಾಜ್ಯದ ನೀರಡಿಕೆಯು ಆಗುವ ಸಮಯವನ್ನು ತೀವ್ರವಾಗಿ ತಂದುಕೊಡು.

(೧೯೯) ಕರ್ಮವು ಮುಕ್ತಿಯ ಸಾಧನವಿರುತ್ತದೆ. ಆದರ ಸ್ವರೂಪವು ಯೋಗ್ಯ ಪ್ರಸಂಗದಲ್ಲಿ ಬದಲಾಗುತ್ತದೆ. ಆದುದರಿಂದ ಆಧುನಿಕ ಕರ್ಮಕಾಂಡವು ಪುರಾಣವಲ್ಲ. ಅದು ನೂತನ ಸ್ವರೂಪವನ್ನು ಹೊಂದಿದ್ದು ಕೆಳಗೆ ಬರೆದ ಪ್ರಕಾರ ನಿರೂಪಿಸುತ್ತವೆ:—"ನಿಮಗೆ ಪುರಾಣಕಾಲದ ರಾಜಕೀಯಕ್ಷಯದಿಂದ ನವಕೊಂಡು ಸಾಯದೆ ಉದ್ಯೋಗ-ವ್ಯಾಪಾರ-ಕಲಾಕೌಶಲ್ಯಗಳ ಪ್ರಗತಿಪರ ಯುಗದಲ್ಲಿ ಬದಕುವ ಮನಸ್ಸಿದ್ದರೆ ವಿದ್ಯುತ್‌ರೂಪೀ ಶಕ್ತಿಯನ್ನು ನಿಮ್ಮ ಸ್ವಾಧೀನ ಮಾಡಿಕೊಳ್ಳಿರಿ; ಬಾಷ್ಪರೂಪೀ ವರುಣನನ್ನು ನಿಮ್ಮ ಆಳಾಗಿ ಇಟ್ಟುಕೊಳ್ಳಿರಿ; ಕೃಷಿರೂಪೀ ಕುಬೇರನ ಗೆಳೆತನವನ್ನು ಸಂಪಾದಿಸಿರಿ. ಮತ್ತು ಈ ಆಧುನಿಕ ದೇವತೆಗಳ ಪರಿಚಯವನ್ನು ನಿಮಗೆ ಮಾಡಿಕೊಡಲಿಕ್ಕೆ ತತ್ಕಲಾಭಿಜ್ಞ ಶಾಸ್ತ್ರಿಗಳೇ ನಿಮ್ಮ ಯೋಗ್ಯ ಪುರೋಹಿತರೆಂದು ತಿಳಿದುಕೊಳ್ಳಿರಿ."

(೧೨೦) ಧರ್ಮವು ಅಥವಾ ಕರ್ತವ್ಯವು ನಾಲ್ಕು ಪ್ರಕಾರದ್ದು ಇರುತ್ತದೆ. ಮೊದಲನೇ ಕರ್ತವ್ಯವು ಈಶ್ವರನ ಸಂಬಂಧವಾಗಿ ಇರುತ್ತದೆ. ಎರಡನೇ ಕರ್ತವ್ಯವು ಮನುಷ್ಯ ಮಾತ್ರರ ಮೇಲೆ ಪ್ರೇಮಮಾಡುವ ಸಂಬಂಧವಾಗಿ ಇರುತ್ತದೆ. ಮೂರನೇ ಕರ್ತವ್ಯವು ದೇಶಸೇವೆ ಮಾಡುವ ಸಂಬಂಧವಾಗಿ ಇರುತ್ತದೆ. ನಾಲ್ಕನೇ ಕರ್ತವ್ಯವು ಆತ್ಮವಿಷಯದ ಸಂಬಂಧವಾಗಿ ಇರುತ್ತದೆ. ಈ ನಾಲ್ಕನೇ ಕರ್ತವ್ಯವೇ ಎಲ್ಲ ಕರ್ತವ್ಯಗಳಲ್ಲಿ ಶ್ರೇಷ್ಠವಿರುತ್ತದೆ.

(೧೨೧) ಸತ್ಯವನ್ನು ಸಿದ್ಧಮಾಡಿಕೊಡಲಿಕ್ಕೆ ಎರಡನೇ ಆಧಾರವು ಬೇಕಾಗಿಲ್ಲ. ಅದು ಸ್ವಯಂಸಿದ್ಧವಿರುವದು.

(೧೨೨) ಎರಡನೆಯವರಿಗೆ ಹೇಗೆ ಚನ್ನಾಗಿ ಕಂಡೇನು? ಎಂಬ ದುಷ್ಟ ಮತ್ತು ಘಾತುಕ ನಡತೆಯು ಸಮಾಜಕ್ಕೆ ಅಂಟಿಕೊಂಡಿರುತ್ತದೆ. ಇದೇ ನೀತಿಯ ಅತಿ ಕೆಟ್ಟ ಭಾಗವು.

(೧೨೩) ಪತಿಪತ್ನಿಯರು ಪರಸ್ಪರರ ಕಲ್ಯಾಣವನ್ನು ಮಾಡಲಿಕ್ಕೆ ಆರಂಭಿಸಿದ ಹೊರತಾಗಿ ನೀತಿಯ ಅಥವಾ ಧರ್ಮದ ಪ್ರಗತಿಯು ಖಂಡಿತವಾಗಿ ಆಗಲಾರದು.

(೧೨೪) ಪರೋಪದೇಶಪಾಂಡಿತ್ಯದಿಂದಲೇ ನೈತಿಕ ದಾರಿದ್ರ್ಯವು ಉತ್ಪನ್ನವಾಗುತ್ತದೆ.

(೧೨೫) ಒಮ್ಮೊಮ್ಮೆ ಆಸಕ್ತಿಗೆ ಪ್ರೇಮವೆಂಬ ಹೆಸರು ಒರುವ ಮೇರೆಗೆ ನೈತಿಕ ದೌರ್ಬಲ್ಯಕ್ಕೆ ಪಾವಿತ್ರ್ಯವೆಂಬ ಹೆಸರು ಬರುತ್ತದೆ.

(೧೨೬) ಈಶ್ವರನ ಕಣ್ಣೊಳಗೆ ಮಣ್ಣು ಚಲ್ಲಲಿಕ್ಕೆ ಪ್ರಯತ್ನಮಾಡುವವರು ಸ್ವತಃ ಕುರುಡರಾಗಿರುತ್ತಾರೆಂದು ತಿಳಿಯತಕ್ಕದ್ದು.

(೧೨೭) ನಿಮ್ಮ ಮನಸ್ಸಿನಲ್ಲಿ ಬಂದ ಕೂಡಲೆ ಎರಡನೆಯವರ ಮನಸ್ಸಿನಲ್ಲಿ ಬಂತೆಂದು ತಿಳಿಯತಕ್ಕದ್ದು. ಮನಸ್ಸುಗಳಲ್ಲಿ ತಂತಿಯಿಲ್ಲದ ತಾರಾಯಂತ್ರವಿರುತ್ತದೆ.

(೧೨೮) ಪರದ್ವೇಷವು ಪರಹತ್ಯವಿರುತ್ತದೆ.

---

# ತತ್ವಜ್ಞಾನ.

(೧೨೯) ಸೆರೆಯಾಳು ಸ್ವಂತ ಇಚ್ಛೆಯಿಂದ ಸೆರೆಯಾಳು ಇರುತ್ತಾನೆ; ಅರಸನು ಸ್ವಂತ ಇಚ್ಛೆಯಿಂದ ಅರಸನಿರುತ್ತಾನೆ. ಇದರಂತೆ ಸುಂದರ ಮನುಷ್ಯನು ಸ್ವಂತ ಇಚ್ಛೆಯಿಂದಲೇ ಸುಂದರನಿರುತ್ತಾನೆ.

(೧೩೦) ನಮಸ್ಕಾರ ಮಾಡುವದು ಸುಲಭವಿರುತ್ತದೆ; ಆದರೆ ನಮಸ್ಕಾರ ಮಾಡಿಸಿಕೊಳ್ಳುವದು ಬಹಳ ಕಠಿಣವಿರುತ್ತದೆ.

(೧೩೧) ನೀವು ಪಾರದರ್ಶಕರಾಗಿರಿ; ಅಂದರೆ ನಿಮ್ಮ ದ್ವಾರದಿಂದ ಸೂರ್ಯನ ಪ್ರಕಾಶವಿಷ್ಟೇ ಅಲ್ಲ, ಸೂರ್ಯನ ಸೂರ್ಯನು ಸಹ ಪ್ರಕಾಶಿತನಾಗುವನು.

(೧೩೨) ವಿಚಾರಸಾದೃಶ್ಯವನ್ನು ಬಂಧುಭಾವದ ತಳಹದಿಯಾಗಿ ಮಾಡಿರಿ. ಆದರೆ ಜಾತಿ, ಧರ್ಮ, ಪಂಥ, ಬಣ್ಣ ಇವುಗಳನ್ನು ಬಂಧುಭಾವದ ಆಧಾರವಾಗಿ ಮಾಡಿಕೊಳ್ಳಬೇಡಿರಿ.

(೧೩೩) ಗಿಳಿಯು ಒಂದು ಅಡ್ಡ ಹಗ್ಗದ ಮೇಲೆ ಕುಳಿತಿರುವಾಗ ಆ ಹಗ್ಗವು ತಿರುಗಿದ ಕೂಡಲೆ ಅದು ಸಹ ಅಡ್ಡ ತಿರುಗುತ್ತದೆ. ಆದರೆ ಅದು ತಾನು ಕೆಳಗೆ ಬಿದ್ದೇನೆಂಬ ಹೆದರಿಕೆಯಿಂದ ಆ ಹಗ್ಗವನ್ನು ಬಿಟ್ಟುಕೊಡುವದಿಲ್ಲ. ಆದರೆ ಕೊನೆಗೆ ಆ ಹೆದರಿಕೆಯಿಂದಲೇ ಬೇಡರವನ ಸ್ವಾಧೀನಕ್ಕೆ ಹೋಗುವದು!

(೧೩೪) ಜನರು ನಿಜವಾಗಿ ಅರಮನೆಯಲ್ಲಾಗಲಿ, ಗುಡಿಸಲದಲ್ಲಾಗಲಿ ಇರುವದಿಲ್ಲ. ಅವರು ಸ್ವಂತ ಕಲ್ಪನಾಸೃಷ್ಟಿಯಿಂದ ಉತ್ಪನ್ನವಾಡಿದ ನರಕದಲ್ಲಿ ಅಥವಾ ಶಾಂತನಿವಾಸದಲ್ಲಿ ಇರುವರು.

(೧೩೫) ದ್ರವ್ಯವು ಸ್ವತಃ ಸುಖವಿರದೆ ಐಹಿಕ ಸುಖದ ಒಂದು ಸಾಧನವಿರುವ ಮೇರೆಗೆ ಕರ್ಮವು ಮುಕ್ತಿಯಿರದೆ ಮುಕ್ತಿಯನ್ನು ಪ್ರಾಪ್ತ ಮಾಡಿಕೊಳ್ಳುವ ಒಂದು ಕ್ಷುದ್ರವಾದ ಸಾಧನವಿರುತ್ತದೆ.

(೧೩೬) ಬದುಕಬೇಕೆಂಬ ಅಪೇಕ್ಷೆಯು ಅಖಿಲ ದುಃಖದ ತಾಯಿಯು; ಆದರೆ ಸಾಯುವ ಸಿದ್ಧತೆಯು ಯಾವತ್ತು ಸುಖದ ತಾಯಿಯು.

(೧೩೭) ಯಾವದಾದರೂ ಅವಯವವು ಮಿತಿಮೀರಿ ಬೆಳೆಯಿತೆಂದರೆ, ಅದು ಕುರುವು ಇರಲಿ, ಖಜ್ಜಿ ಇರಲಿ, ಅಥವಾ ಏನಾದರೂ ಸೂಕ್ಷ್ಮ ಜಂತು ರೂಪವಿರಲಿ, ಅದನ್ನು ನಾವು ರೋಗವೆಂದು ತಿಳಿಯುವ ಪ್ರಕಾರ ಮನಸ್ಸಿನ ಭಾವನೆಯು ಅಥವಾ ವೃತ್ತಿಯು ಸ್ವತಂತ್ರ ರೀತಿಯಿಂದ ಮಿತಿಮೀರಿ ಬೆಳೆದು ನಮ್ಮ ಮಾನಸಿಕ ಅವಸ್ಥೆಯನ್ನು ಕೆಡಿಸಿದರೆ ಅದನ್ನು ಸಹ ರೋಗವೆಂತಲೇ ಎಣಿಸತಕ್ಕದ್ದು. ಯಾಕಂದರೆ ಯಾವದಾದರೂ ಅವಯವವು ಮಿತಿಮೀರಿ ಬೆಳೆದು ಎಲ್ಲ ಶರೀರವನ್ನು ತನ್ನ ಕಡೆಗೆ ಎಳೆದುಕೊಂಡು ಅದನ್ನು ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡರೆ ರೋಗದ ಪ್ರಾದುರ್ಭಾವವಾದಂತಾಗುವದು. ಈ ನೇಮವು ಮನೋವಿಕಾರಕ್ಕೂ ಹತ್ತುತ್ತದೆ.

(೧೩೮) ಒಂಟೆಯ ಮೇಲೆ ಕುಳಿತ ಬಳಿಕ ಮೈ ಅಗಳಾಡಿಸುವದನ್ನು ತಪ್ಪಿಸುವದು ಅಶಕ್ಯವಿರುವ ಪ್ರಕಾರ ಲೌಕಿಕ ಪ್ರೇಮದಲ್ಲಿ ಸಿಕ್ಕ ಬಳಿಕ ದುಃಖವನ್ನು ತಪ್ಪಿಸುವದು ಅಶಕ್ಯವು.

(೧೩೯) ಹೊಣೆಯು ಬೇಡಾದರೆ ಪಾರಿತೋಷಕವನ್ನು ಅಥವಾ ಪ್ರತಿಫಲವನ್ನು ಅಪೇಕ್ಷಿಸಬೇಡಿರಿ.

(೧೪೦) ಒಮ್ಮೆ ನಿದ್ರೆಯಿಂದ ಎಚ್ಚರಾದವನು ಪುನಃ ನಿದ್ರೆಯನ್ನು ಮಾಡುವದಿಲ್ಲ. ಯಾಕಂದರೆ ಅವನು ನಿದ್ರೆಯ ಸ್ಥಿತಿಯಲ್ಲಿಯೇ ನಿದ್ರೆಯನ್ನು ನಾಶಮಾಡುತ್ತಾನೆ.

(೧೪೧) ಇಚ್ಛೆಯು ಸ್ಫೂರ್ತಿಯ ತಾಯಿಯು.

(೧೪೨) ಸತ್ಯವು ಕಾಲಚೆಂಡಿನಂತೆ ಇರುತ್ತದೆ.

(೧೪೩) ಮೃತ್ಯುವು ನಿಮಗೆ 'ನಿಮ್ಮ ಹತ್ತರ ಏನು ಇರುತ್ತದೆ?' ಎಂದು ಕೇಳದೆ 'ನೀವು ಯಾರು?' ಎಂದು ವಿಚಾರಿಸುತ್ತದೆ. ಇದೇ ಜೀವಿತ ರಹಸ್ಯವಿರುತ್ತದೆ.

(೧೪೪) ನಿಜವಾದ ಧರ್ಮರಹಸ್ಯವು ಈಶ್ವರನ ಮೇಲಿನ ವಿಶ್ವಾಸ ದಲ್ಲಿ ಇರುವದಿಲ್ಲ; ಆದರೆ ಮನುಷ್ಯನಲ್ಲಿಯ ಈಶ್ವರತ್ವದ ಮೇಲಿನ ಅಚಲ ಶ್ರದ್ಧೆ ಯಲ್ಲಿ ಇರುತ್ತದೆ.

(೧೪೫) ವ್ಯಾಪಾರವು ಸೃಷ್ಟಿಯು ವಿರುದ್ಧವಾದ್ದು ಇರುತ್ತದೆ. ಮನುಷ್ಯನ ಮೂಲ ಸ್ವಭಾವವು ಸೂರ್ಯನಂತೆ ದಾನಪ್ರಿಯುವಿರುವದು. ಆದು ದರಿಂದ ದಾನವೃತ್ತಿಯಿಂದ ಮನುಷ್ಯನ ವಿಚಾರವು ವ್ಯಾಪಕವಾಗಿಯೂ ಮುಕ್ತವಾಗಿಯೂ ಇರುವದು. ಆದರೆ ಪ್ರತಿಗ್ರಹವೃತ್ತಿಯಿಂದ ಅದು ಸಂಕು ಚಿತವಾಗಿ ದುಃಖದಲ್ಲಿ ಪರಿಣಮಿಸುವದು.

(೧೪೬) ಜನರ ಕೂಡ ನಡೆಯುವಾಗ ಹಾಳೇಹದ್ದಿನಂತೆ ಆಗಬೇ ಡಿರಿ; ಆದರೆ ಹಂಸಪಕ್ಷಿಯಂತೆ ಆಗಿರಿ.

(೧೪೭) ಗಿಡವನ್ನು ಕಲಮಮಾಡಿದರೆ ಅದು ಕಸುವಿನಿಂದ ಬೆಳೆದು ಸುಂದರವಾಗುವದು. ಇದರಂತೆಯೇ ಟೀಕೆಯು ಪರಿಣಾಮವಾಗುವದು.

(೧೪೮) ಮನುಷ್ಯರೂಪೀ ಗಿಡಕ್ಕೆ ಟೀಕಾರೂಪೀ ಕತ್ತರಿಯ ಸ್ಪರ್ಶ ವಾದ ಕೂಡಲೆ ದೃಷ್ಟಿಯನ್ನು ಅಂತರ್ಮುಖಮಾಡುವ ವೇಳೆಯು ಬಂತೆಂದು ತಿಳಿಯತಕ್ಕದ್ದು.

(೧೪೯) ಜಗತ್ತಿನ ಸುಧಾರಕರೆಂದು ನಾವು ಮುಂದೆ ಸರಿದಕ್ಷಣವೇ ನಾವು ಅದರ ದುರ್ಧಾರಕರಾಗುತ್ತೇವೆ.

(೧೫೦) ಆಸಕ್ತಿಯು ಭಯದ ಮತ್ತು ಚಿಂತೆಯ ಮೂಲ ಕಾರಣ ವಿರುತ್ತದೆ.

(೧೫೧) ಹೂವಿನ ಮಧುರ ಸುವಾಸನೆಯ ಆಸ್ವಾದವನ್ನು ತೆಗೆದು ಕೊಳ್ಳುವದಿದ್ದರೆ ನೀವು ಅದನ್ನು ಕೈಮುಟ್ಟದೆ ದೂರಿಂದಲೇ ತೆಗೆದುಕೊಳ್ಳ ತಕ್ಕದ್ದು. ಅಂದರೆ ನೀವು ನಿಜವಾದ ಆನಂದವನ್ನು ಉಪಭೋಗಿಸುವಿರಿ.

(೧೫೨) ಪುಂಗಿಯನ್ನು ಬಾರಿಸಿ ನೀವು ಒಮ್ಮೆ ಹಾವನ್ನು ಮೋಹಿತ ಮಾಡಿದ ಕೂಡಲೆ ಅದರ ಹಲ್ಲನ್ನು ಮುರಿಯಲು ಶಕ್ತರಾಗುವಿರಿ. ಅದರಿಂದ ಆ ಹಾವು ನಿರುಪದ್ರವಿಯಾಗುವದು. ಅದರಂತೆ ಮನಸ್ಸು ಒಮ್ಮೆ ಅಧ್ಯಾತ್ಮಿಕ ಜ್ಞಾನದಿಂದ ಮೋಹಿತವಾದ ಬಳಿಕ ಅದು ನಿರ್ವೀರ್ಯವಾಗಿ ನೀವು ಹೇಳಿದಂತೆ ಕೇಳುವದು.

(೧೫೩) ಕೊಳಲನ್ನು ಮಾಡಬೇಕಾದರೆ ಮೊದಲಿಗೆ ಬಿದರಿನೊಳಗಿನ ತಿಳಲನ್ನು ತೆಗೆದುಬಿಟ್ಟು ಅದನ್ನು ಪೊಳ್ಳುಮಾಡಿ ಆಮೇಲೆ ಛಿದ್ರಗಳನ್ನು ತೆಗೆಯ ಬೇಕಾಗುತ್ತದೆ. ಅಂದರೆ ಅದರಿಂದ ಜಗತ್ತಿಗೆ ಮೋಹಿಸಿಬಿಡುವಂಥ ಸಂಗೀತವು ಹೊರಬೀಳುವದು ಶಕ್ಯವಾಗುತ್ತದೆ. ಇದರಂತೆ ಜಗತ್ತನ್ನು ಮೋಹಿಸಿ ಬಿಡುವಂಥ ಮನಃಸಂಗೀತವು ನಿಮ್ಮಿಂದ ಹೊರಬೀಳಬೇಕಾಗಿದ್ದರೆ ನೀವು ಅದರೊಳಗಿನ ಅಹಂಕಾರವೆಂಬ ತಿಳಲನ್ನು ತೆಗೆದುಬಿಟ್ಟು ಭಕ್ತಿಯ ಛಿದ್ರಗಳನ್ನು ತೆಗೆಯಬೇಕಾಗುತ್ತದೆ.

(೧೫೪) ಧ್ವನಿವಾಹಕ ಯಂತ್ರದಿಂದ ಒಂದು ಅಶುಭ ವರ್ತಮಾನವು ಬಂದ ಕೂಡಲೆ ಆ ಯಂತ್ರವನ್ನು ಮುರಿಯುವದು ಮೂರ್ಖತನವಿರುವಂತೆ ನಿಮ್ಮ ಮನಸ್ಸಿಗೆ ಯಾವದೊಂದು ಕಾರಣದಿಂದ ಅಸ್ವಸ್ಥತೆಯುಂಟಾದರೆ ಆ ಅಸ್ವಸ್ಥತೆಯನ್ನು ಪ್ರೇಮಮಯವಾದ ನೇಮದಿಂದ ತೆಗೆದುಬಿಡುವ ಬದಲಾಗಿ ಒದರಾಡುವದು, ಚೀರಾಡುವದು ಮತ್ತು ಅಶಾಂತವಾದ ಪ್ರಯತ್ನವನ್ನು ಕೈಕೊಳ್ಳುವದು ಮೂರ್ಖತನವಿರುತ್ತದೆ.

(೧೫೫) ನಮ್ಮ ಪ್ರಿಯ ಮಿತ್ರನ ಪತ್ರವು ಬಂದ ಕೂಡಲೆ ಅದನ್ನು ನೋಡಿ ನಮಗೆ ಆನಂದವಾಗುತ್ತದೆ. ಪತ್ರದ ಬಗ್ಗೆ ನಮಗೆ ಬಹಳ ಪ್ರೀತಿಯು ಉತ್ಪನ್ನವಾಗುತ್ತದೆ. ಇದರ ಸತ್ಯ ಕಾರಣವು ಆ ಪತ್ರದೊಳಗಿನ ಕಾಗದವು ಮತ್ತು ಅಕ್ಷರಗಳು ಇರದೆ ಮಿತ್ರತ್ವದ ಪ್ರೇಮವು ಇರುತ್ತದೆ. ಇದರಂತೆಯೇ ಪತಿಪತ್ನಿಯರ ಪ್ರೇಮವು ಇರುವದು. ಪತ್ನಿಯು ಪತಿಯ ದೇಹದ ಮೇಲೆ ಪ್ರೇಮವನ್ನು ಮಾಡುತ್ತಾಳೆಂದರೆ ಅದು ಮಿತ್ರನ ಪತ್ರದ ಮೇಲೆ ಪ್ರೇಮವನ್ನು ಮಾಡಿದಂತಾಗುವದು. ಆದರೆ ಪತಿಯ ಆತ್ಮದ ಮೇಲೆ ಪ್ರೇಮವನ್ನು ಮಾಡುತ್ತಾಳೆಂದರೆ ಪತ್ರವನ್ನು ಕಳಿಸುವ ಮಿತ್ರನ ಮೇಲೆ ಪ್ರೇಮವನ್ನು ಮಾಡಿದಂ

ತಾಗುತ್ತದೆ. ಸಾರಾಂಶ-ದೇಹವು ಅಕ್ಷರ, ಪತ್ರ, ಅಥವಾ ಚಿಹ್ನದಂತೆ ಇರು ತ್ತದೆ. ಆದರೆ ಅದು ನಿಜವಾದ ವಸ್ತುವಲ್ಲ.

(೧೫೬) ನೀವು ನಿಜವಾದ ಕೆಲಸವನ್ನು ಏನೂ ಮಾಡದೆ 'ನಮಗೆ ಕೆಲಸವು ಬಹಳವಿರುತ್ತದೆ' 'ನಮಗೆ ವೇಳೆಯೇ ಇಲ್ಲ. ವೇಳೆಯೇ ಇಲ್ಲ' ಎಂದು ಅನ್ನುವದು ಸುಧಾರಣೆಯ ಮಾರ್ಗವೇ? ನಮ್ಮ ಯಾವತ್ತು ಅವಕಾಶ್ಯ ವೇಳೆಯನ್ನು ಮತ್ತು ಶಕ್ತಿಯನ್ನು ನಮ್ಮ ಬಂಧನಗಳನ್ನು ಹೆಚ್ಚು ಮಾಡಿ ಕೊಂಡು ಸ್ವತಃ ಸೆರೆಯಾಳಾಗುವದರಲ್ಲಿ ಉಪಯೋಗಿಸುವದರಿಂದ ನಮ್ಮ ಆತ್ಮವಿನಾಶವನ್ನು ಮಾಡಿಕೊಂಡಂತೆ ಆಗುವದಿಲ್ಲವೇ?

(೧೫೭) ಯಾವ ಪ್ರಕಾರ ಸುವರ್ಣಕಾರನು ಒಂದು ಆಭರಣವನ್ನು ಮಾರಲಿಕ್ಕೆ ತೆಗೆದುಕೊಳ್ಳುವಾಗ ಆ ಆಭರಣದ ಸೌಂದರ್ಯದ ಕಡೆಗೆ ನೋಡದೆ ಚಿನ್ನದ ಬಣ್ಣ ಮತ್ತು ಅದರ ತೂಕ ಇವುಗಳ ಕಡೆಗೇ ಮಾತ್ರ ಲಕ್ಷ್ಯ ಕೊಡುವನೋ ಅದರಂತೆ ನಾವು ನಮ್ಮ ಮನಸ್ಸನ್ನು ಉಪಯೋಗಿಸುವಾಗ ಆಧ್ಯಾತ್ಮಿಕಲಾಭದ ಕಡೆಗೆ ಮಾತ್ರ ದೃಷ್ಟಿಯನ್ನಿಡಬೇಕು.

(೧೫೮) ತಾಯಿಯು ನೆರೆಯ ಕೋಣೆಯಲ್ಲಿ ಹೋದಾಗ್ಯೂ ಸಣ್ಣ ಕೂಸು ಅಳುತ್ತದೆ. ಅದರಂತೆ ಮಿತ್ರರು ಅಥವಾ ಆಪ್ತರು ವಸ್ತುತಃ ಮೃತ ರಾಗದೆ ಇದ್ದಾಗ್ಯೂ ಅವರು ದೇಹತ್ಯಾಗವನ್ನು ಮಾಡಿದ ಕೂಡಲೆ ಅಜ್ಞ ಜನರು ಅಳುತ್ತಾರೆ.

(೧೫೯) ಪ್ರೇಮದ ಭಾಷೆಯು ಎಲ್ಲರಿಗೂ ತಿಳಿಯುತ್ತದೆ.

(೧೬೦) ಪತಂಗವು ತನ್ನ ಕಡೆಗೆ ಬರಬೇಕೆಂದು ದೀಪವು ತನ್ನ ಸ್ಥಳವನ್ನು ಬಿಟ್ಟುಕೊಟ್ಟು ಅದರ ಕಡೆಗೆ ಹೋಗುವದಿಲ್ಲ. ಇದರಲ್ಲಿಯೇ ಆಕರ್ಷಕತೆಯ ರಹಸ್ಯವು ತುಂಬಿರುತ್ತದೆ.

(೧೬೧) ಐಕ್ಯಾನುಭವವು ಸ್ತ್ರೀಪುರುಷರ ಭಿನ್ನತ್ವದ ನಿಜವಾದ ಉದ್ದೇಶವಿರುತ್ತದೆ. ಶರೀರ ಐಕ್ಯವು ಅದರ ಪ್ರತಿಬಿಂಬವಿರುತ್ತದೆ. ಮತ್ತು ಅದರ ದೃಷ್ಟಾಂತರೂಪವಿರುತ್ತದೆ.

(೧೬೨) ನಾವು ಬಾಯಿಂದ ಮಾತಾಡುವದನ್ನು ಬಿಟ್ಟರೆ ಕಲ್ಲುಗಳು ಸಹ ನಮ್ಮ ಕೂಡ ಮಾತಾಡಲಿಕ್ಕೆ ಆರಂಭಮಾಡುತ್ತವೆ.

(೧೬೩) ಸೆರೆಯಾಳು ಸೆರೆಯಾಳಿಗೆ ಸಹಾಯ ಮಾಡಲು ಸಮರ್ಥನಾಗುವದಿಲ್ಲ. ಸೆರೆಮನೆಯ ಹೊರಗಿನ ಸಭ್ಯಗೃಹಸ್ಥನೇ ಆ ಕೆಲಸವನ್ನು ಮಾಡಲು ಸಮರ್ಥನಾಗುತ್ತಾನೆ.

(೧೬೪) ನದಿಯು ಉಗಮವು ಪರ್ವತದೊಳಗಿನ ಉನ್ನತವಾದ ಅರಣ್ಯದಲ್ಲಿರುವದು. ಆದುದರಿಂದ ಅದು ಕೆಳಗಿನ ಪ್ರದೇಶಕ್ಕೆ ಪೋಷಕರಸವನ್ನು ಕೊಡಲು ಶಕ್ಯವಾಗುತ್ತದೆ.

(೧೬೫) ಸುಸಂಸ್ಕೃತ ನಾಗರೀಕರಿಗೆ ಅರಣ್ಯದಲ್ಲಿಯ ಸಾಧುಗಳ ಬರಹದಿಂದ ಸಹ ಲಾಭವಾಗುವದು. ಆದರೆ ಅದೇ ಸಾಧುಗಳು ಅಜ್ಞಾನ ಜನರೊಳಗೆ ಬಂದರೆ ಆ ಜನರು ಅವರಿಂದ ದೂರ ಓಡಿಹೋಗುವರು.

(೧೬೬) ಮನುಷ್ಯನ ಬೆಲೆಯು ಅವನ ತೊಗಲಿನಲ್ಲಿ ಇರುವದಿಲ್ಲ. ಅಂದಮೇಲೆ ನಾವು ಅವನನ್ನು ಸ್ಪರ್ಶ ಮಾಡುವದನ್ನು ಏಕೆ ಬಿಡಬೇಕು?

(೧೬೭) ಬಳಿಕೆಯಲ್ಲಿಯ ನೀರು ಕೆಡುವದಿಲ್ಲ; ಆದರೆ ಸೀಸೆ (ಬಾಟ್ಲಿ) ಯಲ್ಲಿಯ ನೀರು ಕೆಡುವದು ಹಾಗೂ ಕೊಳೆತು ನಾರುವದು. ಇದರಂತೆ **ಭಕ್ತಿಯು ಇಲ್ಲದ** ಜ್ಞಾನದ ಪರಿಣಾಮವಾಗುವದು.

(೧೬೮) ರಾಷ್ಟ್ರದೊಳಗೆ ಜಗಳವು ಬೆಳೆದರೆ ದೇಶಭಕ್ತರ ಸುಗ್ಗಿಯು ಬಂದಂತೆ ಆಗುತ್ತದೆ.

(೧೬೯) ಜಾಣತನಕ್ಕೆ ಮಾನಮರ್ಯಾದೆಗಳ ಜೋಡಿಯು ಕೂಡಿದರೆ ಡಾಂಭಿಕತನಕ್ಕೆ ಹೆಚ್ಚು ಆಶ್ರಯವು ದೊರಕುತ್ತದೆ.

(೧೭೦) ಹೌರಗೆ ಸಮ್ಮತಿಯನ್ನು ಕೊಡುವವನು. ತನ್ನ ವಚನವನ್ನು ಕ್ವಚಿತ್ತಾಗಿ ಪಾಲಿಸುತ್ತಾನೆ.

(೧೭೧) ಸದ್ಗುಣಕ್ಕೆ ಪ್ರಕಟನೆಯು ಅಗತ್ಯವಿಲ್ಲ.

(೧೭೨) ಸದ್ವರ್ತನವೇ ಈಶ್ವರತ್ವವು.

(೧೭೩) ನಮ್ಮ ಮೆಚ್ಚಿಗೆಯು ಅಥವಾ ನಮ್ಮ ಆರಿಸುವಿಕೆಯು ನಾವು ಹೇಗೆ ಇರುತ್ತೇವೆಂಬದರ ಕನ್ನಡಿಯು ಇರುತ್ತದೆ.

(೧೭೪) ನಿಮಗೆ ಏನು ಸೇರುತ್ತದೆಂಬದನ್ನು ಹೇಳಿರಿ; ಅಂದರೆ ನೀವು ಹೇಗೆ ಇದ್ದೀರೆಂಬುದನ್ನು ಹೇಳುತ್ತೇನೆ.

(೧೭೫) ದುಡ್ಡಿನಂತೆ ಸ್ತುತಿಯಾದರೂ ಮನುಷ್ಯನನ್ನು ಗುಲಾಮನಾಗಿ ಮಾಡುತ್ತದೆ.

(೧೭೬) ಸಕ್ಕರಿಯು ಸವಿ ಇರುವ ಬದಲಾಗಿ ನಾವು ಸ್ವತಃ ಸವಿ ಇರುತ್ತೇವೆ. ಆಕಾಶವು ನೀಲಿಬಣ್ಣದ್ದು ಇರುವ ಬದಲಾಗಿ ನಮ್ಮ ದೃಷ್ಟಿಯು ನೀಲಿಬಣ್ಣದ್ದು ಇರುತ್ತದೆ.

(೧೭೭) ವಿಲಾಸಸುಖೋಪಭೋಗಗಳಲ್ಲಿ ನಮ್ಮ ಹ್ರಾಸದ ಬೀಜಗಳಿರುತ್ತವೆ.

(೧೭೮) ಪಾಪದ ದಾಸ್ಯತ್ವವನ್ನು ಮಾಡುವ ಸ್ವಾತಂತ್ರ್ಯವನ್ನು ನಷ್ಟಮಾಡಿರಿ.

(೧೭೯) ಜೀವನ ಕಲೆಯನ್ನು ಚನ್ನಾಗಿ ಬಲ್ಲವನೇ ಯೋಗಿಯು.

(೧೮೦) ಪರದಾಸ್ಯ ಯುಕ್ತತೆಯು ಬೇಕಾಗಿದ್ದರೆ ಸ್ವದಾಸ್ಯತ್ವವನ್ನು ಅಂದರೆ ಆತ್ಮಸಂಯಮನವನ್ನು ಮಾಡುವದಕ್ಕೆ ಸಿದ್ಧರಾಗಿರಿ.

(೧೮೧) ವಿದ್ವತ್ತಿಕೆಯು ಮತ್ತು ಜಾಣತನವು ಬೇರೆ ಬೇರೆ ಇರುತ್ತವೆ. ವಿದ್ವತ್ತಿಕೆಯು ಭೂತ ಕಾಲದ ಕಡೆಗೆ ಲಕ್ಷ್ಯಕೊಡುತ್ತದೆ. ಆದರೆ ಜಾಣತನವು ಭವಿಷ್ಯತ್ಕಾಲದ ಕಡೆಗೆ ಲಕ್ಷ್ಯಕೊಡುತ್ತದೆ.

(೧೮೨) ಅಗತ್ಯಗಳು ಕಡಿಮೆ ಇರುವ ಮನುಷ್ಯನೇ ಹೆಚ್ಚು ಶ್ರೀಮಂತನು.

(೧೮೩) ಬುದ್ಧಿಯು ನಿರಾಶೆಹೊಂದಿದ ಕಾರ್ಯವನ್ನು ಪ್ರೇಮವು ಕೊನೆಗಾಣಿಸುತ್ತದೆ.

(೧೮೪) ಮುತ್ಸದ್ದಿಯು ಸುಧಾರಿಸಿದ ಕಾಡು ಮನುಷ್ಯನಿರುತ್ತಾನೆ.

(೧೮೫) ಶತ್ರುಗಳ ರಕ್ಷಣವನ್ನು ಮಾಡಿದರೆ ಶತ್ರುಗಳೇ ಉಳಿಯುವದಿಲ್ಲ.

(೧೮೬) ಅಂತಃಕರಣವು ಸಂಶಯಯುಕ್ತವಾಗಿ ಇರುವದಕ್ಕಿಂತ ಅದರಲ್ಲಿ ತುಪಾಕಿಯ ಗುಂಡು ಹೋಗುವದು ಲೇಸು!

(೧೮೭) ನಾವು ಎಲ್ಲಿಂದ ಬಂದೆವು ಮತ್ತು ಎಲ್ಲಿಗೆ ಹೋಗುತ್ತೇವೆಂಬುದನ್ನು ತಿಳಕೊಂಡವರ ಗೊಡವೆಗೆ ಜಗತ್ತು ಎಂದೂ ಹೋಗುವದಿಲ್ಲ.

(೧೪೮) ಟೀಕಾಕಾರರೂ ನಿಂದಕರೂ ಉಸಕು ಮತ್ತು ಬೂದಿಗಳಂತೆ ಶುದ್ಧೀಕಾರರು ಇರುತ್ತಾರೆ.

(೧೪೯) ಅಂತಃಕರಣವನ್ನು ಕೊಡುವದು ಅಂತಃಕರಣವನ್ನು ಸ್ವಾಧೀನ ಮಾಡಿಕೊಳ್ಳುವ ರಾಮಬಾಣ ಉಪಾಯವು.

(೧೫೦) ತಪ್ಪು ಆಯಿತೆಂದರೆ ಅದಕ್ಕಾಗಿ ಸಂತಾಪಮಾಡಿಕೊಳ್ಳದೆ ಇರುವದೇ ಅದನ್ನು ಸುಧಾರಿಸುವ ಉಪಾಯವು.

(೧೫೧) ಪೂರ್ಣಜ್ಞಾನಿಯು ಮುಗ್ಧನಿರುತ್ತಾನೆ.

(೧೫೨) ಕುದುರೆಯು ಸಿದ್ಧವಾಗಿರುವ ಪಕ್ಷದಲ್ಲಿ ರಣರಂಗಕ್ಕೆ ಹೋಗಲಿಕ್ಕೆ ಏನು ತಡವು?

(೧೫೩) ಹಾವಿನ ವಿಷದ ಬಗ್ಗೆ ನಿಮಗೆ ಹೆದರಿಕೆಯುಂಟಾಗುತ್ತದೆ. ಆದರೆ ಅದರ ತೊಗಲಿನ ಸೌಂದರ್ಯದ ಬಗ್ಗೆ ನಿಮ್ಮ ಮನಸ್ಸಿನಲ್ಲಿ ಎಂದಾದರೂ ವಿಚಾರವು ಬರುವದೇನು?

(೧೫೪) ಕೋಳಿಯು ತಾನಾಗಿಯೇ ಕೂಗುವದಿಲ್ಲ; ಆದರೆ ಸೂರ್ಯ ಪ್ರಕಾಶವು ಅದನ್ನು ಕೂಗಲಿಕ್ಕೆ ಹಚ್ಚುತ್ತದೆ.

(೧೫೫) ತಮ್ಮ ದೇಹವನ್ನು ವಿಶೇಷ ರೀತಿಯಿಂದ ಲಾಲನ ಪಾಲನ ಮಾಡದೆ ಇರುವವರು ಸುದೃಢರಿರುತ್ತಾರೆ.

(೧೫೬) ಮೊದಲಿಗೆ ಭಾಷೆ; ಆಮೇಲೆ ವ್ಯಾಕರಣ. ವ್ಯಾಕರಣವು ಭಾಷೆಯನ್ನು ಹುಗಿಯುವ ಗೋರಿಯು.

(೧೫೭) ನಾಯಿಯು ತನ್ನ ಬಾಲವನ್ನು ಹಿಡಿಯಲಿಕ್ಕೆ ಹೆಚ್ಚೆಚ್ಚು ಪ್ರಯತ್ನಮಾಡಿದಂತೆ ತನ್ನ ಸುತ್ತಲು ಹೆಚ್ಚೆಚ್ಚು ಪ್ರದಕ್ಷಿಣೆಯನ್ನು ಹಾಕಬೇಕಾಗುತ್ತದೆ. ಇದರಂತೆಯೇ ಸಾಮಾನ್ಯ ತತ್ವಜ್ಞಾನಿಗಳ ಗತಿಯು ಇರುವದು. ಅವನು ಅಧಿಕ ಶೋಧವನ್ನು ಮಾಡಿದಂತೆ ಅವನ ತಲೆಯು ವಿಚಾರಮಾಡುವಲ್ಲಿ ಹೆಚ್ಚು ತಲ್ಲೀನವಾಗಬೇಕಾಗುತ್ತದೆ. ಆದುದರಿಂದ ಸ್ಥಿರಬುದ್ಧಿಯುಳ್ಳ ಜ್ಞಾನಿಗೆ ಮಾತ್ರ ಇಷ್ಟ ಕಾರ್ಯದ ಸಿದ್ಧಿಯಾಗುತ್ತದೆ.

(೧೫೮) ಸಾಮಾನ್ಯ ಜನರು ಸಾಯುವ ಸಲುವಾಗಿ ಬದಕುತ್ತಾರೆ; ಆದರೆ ಅಸಾಮಾನ್ಯ ಜನರು ಬದಕುವ ಸಲುವಾಗಿ ಸಾಯುತ್ತಾರೆ.

(೧೯೯) ಮಾತಾಡುವ ಬಾಯಿಗಿಂತ ಕೆಲಸ ಮಾಡುವ ಕೈ ಆಗುವದು ವಾಸಿ.

(೨೦೦) ಜಾತಿಯು **ಚೀನದ ಗೋಡೆ**ಯಂತೆ ಇರುತ್ತದೆ. ಯಾಕಂದರೆ ಅದು ಒಳಗಿನ ಜನರನ್ನು ಒಳಗೆ ಮತ್ತು ಹೊರಗಿನ ಜನರನ್ನು ಹೊರಗೆ ಇಡುತ್ತದೆ.

(೨೦೧) ಉಪ್ಪು ಸೇರುತ್ತದೆಂದು ಸಮುದ್ರದಲ್ಲಿಯೇ ಮುಳುಗಿ ಹೋಗುವದು ಯಾವಲ್ಲಿಯ ನ್ಯಾಯವು?

(೨೦೨) ನಾಸ್ತಿಕನು ಶ್ರದ್ಧೆಯ ಮೇಲೆ ನಿಬಂಧವನ್ನು ಬರೆಯುವದೂ ಕುರುಡನು ದೃಷ್ಟಿ ಶಾಸ್ತ್ರದ ನಿಯಮುಗಳನ್ನು ಬರೆಯುವದೂ ಒಂದೇ.

(೨೦೩) ಸಿಂಹದ ತೊಗಲನ್ನು ಹಾಕಿಕೊಂಡು ಸಿಂಹನಂತೆ ಮೆರೆಯುವದು ನಿಮ್ಮ ಮನಸ್ಸಿನೊಳಗೆ ಇದ್ದಲ್ಲಿ ನೀವು ಜಾತಿಭೇದ, ವಿಷಯ ಭಾವನೆ ಮೊದಲಾದ ನಿಮ್ಮ ಮುಂಚಿನ ಗಾರ್ದಭ ರೂಢಿಗಳನ್ನು ಪೂರ್ಣವಾಗಿ ಬಿಟ್ಟುಬಿಡಿರಿ.

(೨೦೪) ಸೌಂದರ್ಯವು ಕೆಟ್ಟದಕ್ಕೆ ಒಳ್ಳೇ ಸ್ವರೂಪವನ್ನು ಕೊಡಬೇಕೆಂದು ಹೇಳುವ ಶಿಫಾರಸ ಪತ್ರವು ಇರುತ್ತದೆ.

(೨೦೫) ಒಳ್ಳೇ ಹಸಿವೆಯಾದ ಹೊರತಾಗಿ ಊಟ ಮಾಡಿದರೆ ಉಂಡ ಅನ್ನದ ಶುದ್ಧತೆಯು ನಷ್ಟವಾಗುತ್ತದೆ. ಹಾಗೂ ಪಚನಶಕ್ತಿಯು ಕೆಟ್ಟು ಹೋಗಿ ಬೇರೆ ಬೇರೆ ರೋಗದ ಬೀಜಗಳು ಸಿದ್ಧವಾಗುತ್ತವೆ. ಇದೇ ನೇಮವು ಆಧ್ಯಾತ್ಮಿಕ ಖಾದ್ಯಗಳಿಗೂ ಹತ್ತುತ್ತದೆ. ಪಾತ್ರಶುದ್ಧಿಯು ಇಲ್ಲದೆ ತಿಂದರೆ ರೋಗಗಳಾಗುವಂತೆ ಪಾತ್ರಶುದ್ಧಿಯು ಇಲ್ಲದೆ ವೇದಾಂತವನ್ನು ಅಭ್ಯಾಸಮಾಡಿದರೆ ದುರುಳ ಮತ್ತು ದುರ್ವ್ಯಸನಿ ವೇದಾಂತಿಗಳಾಗುತ್ತಾರೆ.

(೨೦೬) ಯಾವನೊಬ್ಬನು ತನ್ನ ಕರ್ತವ್ಯಕರ್ಮವನ್ನು ಮಾಡಿದರೆ ಅಂದರೆ 'ನಿಷ್ಕಾಮ ಕರ್ಮಮಾಡಿದರೆ' ಪರಮೇಶ್ವರನು ತನ್ನ ಕರ್ತವ್ಯವನ್ನು ಮಾಡುವನು; ಅಂದರೆ ಅವನ ಅಪರಾಧಗಳನ್ನು ತೊಳೆದುಬಿಡುವನು. ಇದರಿಂದ ಅವನನ್ನು ಜನರು ಪರಮೇಶ್ವರನಂತೆ ಭಜಿಸುವರು.

(೨೦೭) ಪತ್ನಿಯ ಮೇಲೆ ಪತಿಯ ಅಕೃತ್ರಿಮ ಪ್ರೇಮವಿದ್ದರೆ ಅವಳು ಎಲ್ಲ ಗೃಹಕೃತ್ಯಗಳನ್ನು ಅತಿ ಆನಂದದಿಂದ ಮಾಡುವಳು; ಆದರೆ

ಪತಿಯು ಇತರ ಸ್ತ್ರೀಯ ಮೇಲೆ ಪ್ರೇಮವನ್ನು ಮಾಡುತ್ತಾನೆಂದು ಅವಳಿಗೆ ಕಿಂಚಿತ್ತಾದರೂ ಸಂಶಯು ಬಂದರೆ ಅವಳು ತನ್ನ ಗೃಹಕೃತ್ಯಗಳ ಕಡೆಗೆ ದುರ್ಲಕ್ಷ್ಯವಮಾಡುವಳು. ಇದರಂತೆಯೇ ಪರಮೇಶ್ವರನಾದರೂ ಮಾಡುವನು.

(೨೦೮) ಸಿಂಹದ ಬಾಯೊಳಗೆ ಸಿಕ್ಕಾಗಲೂ ಅದರಮೇಲೆ ವಿಶ್ವಾಸವಿಟ್ಟು ಇರು. ಇದೇ ಪ್ರೇಮದ ನಿಜ ಸ್ವರೂಪವು.

(೨೦೯) ರಾಜಾಧಿರಾಜನಾದ ಆತ್ಮದೇವನ ಓಲಗದ ಸೇವಕರು 'ನಡೆ. ಈ ಮಂದಿರದೊಳಗಿಂದ ಹೊರಟು ಹೋಗು' ಎಂದು ಅಪ್ಪಣೆ ಮಾಡುತ್ತಾರೆ. ಅದು ಯಾರಿಗೆ? ಸ್ತುತಿ ಮತ್ತು ನಿಂದೆಗಳನ್ನು ಮಾಡುವವರಿಗೆ.

(೨೧೦) ಸ್ವಪ್ನಗಳು ಒಳ್ಳೇವು ಅಥವಾ ಕೆಟ್ಟವು ಇರುವದರ ಕಾರಣವು ನಮ್ಮ ಹೊಟ್ಟೆಯೊಳಗಿನ ವಿಕಾರದಲ್ಲಿ ಇರುತ್ತದೆ. ಇದರಂತೆ ಜಗತ್ತಿನೊಳಗಿನ ಸಜ್ಜನರ ಅಥವಾ ದುರ್ಜನರ ವಿಷಯವಾಗಿ ವಿಚಾರಮಾಡುತ್ತ ಕೂಡ್ರದೆ ಪ್ರತಿಯೊಬ್ಬರು ತಮ್ಮ ಸ್ವಂತ ಆಧ್ಯಾತ್ಮಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕು.

(೨೧೧) ಪ್ರತ್ಯಕ್ಷ ಕೇಡಿನಿಂದ ಆಗುವ ಹಾನಿಗಿಂತ ಸಂಶಯದಿಂದ ಹೆಚ್ಚು ಹಾನಿಯು ಆಗುತ್ತದೆ.

(೨೧೨) ಶಿಕ್ಷಣದ ಉದ್ದೇಶವು ಜನರನ್ನು ಸನ್ಮಾರ್ಗಕ್ಕೆ ಹಚ್ಚುವದು ಮತ್ತು ಉದ್ಯೋಗಿಗಳನ್ನು ಮಾಡುವದು ಮಾತ್ರ ಇರದೆ ಅವರಲ್ಲಿ ಸತ್ಯಾನುಭವ ಮತ್ತು ಉದ್ಯೋಗಪ್ರಿಯತೆ ಇವುಗಳನ್ನು ಉತ್ಪನ್ನಮಾಡುವದಿರುತ್ತದೆ.

(೨೧೩) ರಾಜನು ಸಿಂಹಾಸನಾರೂಢನಾದ ಕೂಡಲೆ ಶಾಂತತೆಯು ಮತ್ತು ವ್ಯವಸ್ಥೆಯು ಸಾಮ್ರಾಜ್ಯವು ಸ್ಥಾಪನವಾಗುವಂತೆ ಆತ್ಮದೇವನು ಸಿಂಹಾಸನಾರೂಢನಾದ ಕೂಡಲೆ ಅಂದರೆ ಸ್ವಯಂ ಪ್ರಕಾಶದಿಂದ ಬೆಳಗಲಿಕ್ಕೆ ಹತ್ತಿದ ಕೂಡಲೆ ಅಖಿಲ ಜಾತಿಗಳಲ್ಲಿ ಜೀವನವು ಮತ್ತು ವ್ಯವಸ್ಥೆಯು ಸ್ಥಾಪನವಾಗುತ್ತವೆ.

(೨೧೪) ನಿನಗೆ ದೊರಕಿದ್ದನ್ನು ಎರಡನೆಯವರಿಗೆ ಕೊಡುತ್ತಿರು. ಸ್ವಾರ್ಥಿಯಾಗಬೇಡ.

(೨೧೫) ಕೃತ್ಯವನ್ನು ನಿಷೇಧಮಾಡು; ಆದರೆ ವ್ಯಕ್ತಿಯನ್ನು ನಿಷೇಧಮಾಡಬೇಡ.

# ವಿವಿಧ ಸಂಗ್ರಹ.

(೨೧೬) ಒಬ್ಬ ಸ್ತ್ರೀಯು ತನ್ನ ಸ್ವಪ್ನದೊಳಗೆ ತನ್ನ ಗಂಡನನ್ನು ಕಂಡಳು. ಆಗ ಆವಳಿಗೆ ಬಹಳ ಆನಂದವಾಯಿತು. ಆದರಿಂದ ಆವಳು ತನ್ನ ಗಂಡನಿಗೆ ಆಲಿಂಗನ ಕೊಟ್ಟು—"ಪ್ರಿಯಕರಾ, ನಾನು ನಿಮ್ಮ ಸರ್ವಸ್ವ ಇದ್ದೇನೆ. ನೀವು ನನ್ನ ಸರ್ವಸ್ವ ಇರುತ್ತೀರಿ" ಎಂದು ಹೇಳಿದಳು. ಹೀಗೆ ಮಾತಮಾತಾಡುತ್ತ ಆವಳು ಎಚ್ಚರಾಗಿ ನೋಡಲು ಅವಳ ಕೈಯು ಅವಳ ಮಗ್ಗಲಲ್ಲಿ ಮಲಗಿದ್ದ ನಾಯಿಯ ಕೊರಳಲ್ಲಿ ಇತ್ತು!! ಮನುಷ್ಯನು ಅಜ್ಞಾನ ಅಥವಾ ಅವಿದ್ಯಾರೂಪೀ ನಾಯಿಯನ್ನು ಮಗ್ಗಲಲ್ಲಿ ಇಟ್ಟುಕೊಂಡು ನಿದ್ರೆ ಮಾಡುವತನಕ ಅವನಿಗೆ ಇಂಥ ಸ್ವಪ್ನಗಳು ಬೀಳುವವು ಹಾಗೂ ಅವನು ಅಸುಖಿಯಾಗಿ ಇರುವನು. ಅವನಿಗೆ ಶಾಂತಿಯು ಸಿಗುವದೇ ಇಲ್ಲ. ಅರ್ಥಾತ್ ಅವನಿಗೆ ಜಗತ್ತೆಲ್ಲ ದುಃಖದಾಯಕವಾಗಿ ಕಾಣಿಸುವದು. ಆದುದರಿಂದ ಮಾಯಾ ಮತ್ತು ಅವಿದ್ಯಾ ಇವುಗಳನ್ನು ತ್ಯಜಿಸಿರಿ. ಹಾಗೂ ನೀವು ಸ್ವತಃ ಸ್ವಯಂಭು ಆಗಿರಿ. ನೀವು ಸ್ವತಃ ತಂದುಕೊಳ್ಳುವ ಪ್ರಕಾರ ನಿಮ್ಮಲ್ಲಿ ಯೋಗ್ಯತೆಯು ಬರುವದು.

(೨೧೭) ಧರ್ಮದ ಅರ್ಥಾತ್ ಪರಮೇಶ್ವರನ ಇಚ್ಛೆಯ ವಿರುದ್ಧವಾಗಿ ಸ್ವಂತ ಇಚ್ಛೆಯನ್ನು ಬಲಾತ್ಕಾರದಿಂದ ನಡೆಸುವವನಿಗೂ, ಧರ್ಮದ ನಿಯಮಗಳನ್ನು ಲಕ್ಷಿಸದೆ ಅಜಾಗ್ರತೆಯಿಂದ ನಡೆಯುವವನಿಗೂ ಭಯಂಕರ ದುಃಖಗಳನ್ನೂ ಯಾತನೆಗಳನ್ನೂ ಭೋಗಿಸಬೇಕಾಗುತ್ತದೆ. ಹಾಗೂ ಅವನು ಕೊನೆಗೆ ನಿಶ್ಚಯದಿಂದ ವಿನಾಶವನ್ನು ಹೊಂದಬೇಕಾಗುತ್ತದೆ.

(೨೧೮) ಪಾಪವು ರೋಗವಿರುತ್ತದೆ. ಆದರೆ ಅದರ ಬಗ್ಗೆ ಚಿಂತೆ ಮಾಡುವದು; ಅದಕ್ಕಿಂತ ಹೆಚ್ಚಿನ ರೋಗವಿರುತ್ತದೆ.

(೨೧೯) ವೈರಾಗ್ಯದ ಹೊರತಾಗಿ ನಿಮ್ಮ ಪ್ರಪಂಚವು ಸುಖಮಯವಾಗಲಾರದು; ಮತ್ತು ನೀವು ಇರುವ ಮನೆಯು ಸ್ವರ್ಗದಂತೆ ಆಗಲಾರದು.

(೨೨೦) ಯಾರಲ್ಲಿ ಸಹಕಾರಿತೆಯು ಇರುತ್ತದೋ ಅವರು ಜೀವನಾರ್ಥಕಲಹದಲ್ಲಿ ನಾಲ್ಕೊಸ್ಪತ್ತು ತಡೆಯುತ್ತಾರೆ. ಸ್ಪರ್ಧೆಯ ಅಥವಾ ಮೇಲಾಟದ ತತ್ವವು ಸಹಕಾರಿತೆಯ ತರುವಾಯ ಬರುವದು.

(೨೨೧) ಎರಡನೆಯವರು ಮಾಡಿದಂಥ ಯಾವ ಕೆಲಸವು ನಿಮಗೆ ದೋಷಾರ್ಹವಾಗಿ ಅಥವಾ ಟೀಕಾಸ್ಪದವಾಗಿ ಕಾಣಿಸುತ್ತದೋ ಅದನ್ನು ನೀವು ಸ್ವತಃ ಮಾಡಬೇಡಿರಿ. ಅಂದರೆ ತೀರಿತು; ಆದರೆ ಅದಕ್ಕಾಗಿ ಅವರಿಗೆ ದೋಷಕೊಡಲಿಕ್ಕೆ ನಿಮಗೆ ಏನೇನೂ ಕಾರಣವಿಲ್ಲ.

(೨೨೨) ಈಶ್ವರನೇ ನಮ್ಮ ಮಾತಾ, ಪಿತಾ, ಬಂಧು, ಭಗಿನಿ ಮತ್ತು ಸ್ನೇಹಿ ಇರುತ್ತಾನೆಂದು ನಿರಂತರ ಚಿಂತನ ಮಾಡಿರಿ. ಈ ರೀತಿಯಿಂದ ನಿಮ್ಮ ಎಲ್ಲ ಪ್ರೇಮದ ಪ್ರವಾಹವನ್ನು ಈಶ್ವರನ ಕಡೆಗೆ ತಿರುಗಿಸಿ ಎಲ್ಲ ಬಂಧನದ ಪಾಶಗಳಿಂದ ಮುಕ್ತರಾಗಿರಿ.

(೨೨೩) 'ನಾವೆಲ್ಲರು ಒಂದೇ ಇರುತ್ತೇವೆ, ಒಂದೇ ವಿರಾಟ ಶರೀರ ದೊಳಗಿನ ಅವಯುವಗಳಿರುತ್ತೇವೆ' ಎಂಬ ತತ್ವವನ್ನು ನೀವು ಅಂಗೀಕರಿಸಿ ಅದನ್ನು ಆಚರಣದಲ್ಲಿ ತಂದ ಹೊರತಾಗಿ ನಿಮಗೆ ನಿಮ್ಮ ವ್ಯವಸಾಯದಲ್ಲಿ ಎಂದೂ ಶ್ರೇಯುಸ್ಸು ಬರಲಾರದು.

(೨೨೪) ಹೆಂಗಸರು, ಹುಡುಗರು ಮತ್ತು ಕೂಲಿಯುವರು ಈ ಮೂರು ಜನರ ಶಿಕ್ಷಣದ ಕಡೆಗೆ ದುರ್ಲಕ್ಷ್ಯ ಮಾಡಿದರೆ ರಾಷ್ಟ್ರೀಯತ್ವವೆಂಬ ಗಿಡದ ಬೇರುಗಳನ್ನು ಕಡಿದಂತಾಗುವದು.

(೨೨೫) ದೇಶದೊಳಗಿನ ಭಿಕ್ಷುಕರ ಸಂಖ್ಯೆಯನ್ನು ಬೆಳೆಸಿ ನಮ್ಮ ರಾಷ್ಟ್ರದ ಕೊರಳೊಳಗಿನ ಗುದ್ದಿಯಾಗಿ ಕೂಡ್ರುವದಕ್ಕಿಂತ ನಿಮ್ಮ ಅನ್ನ ನೀರಿನ ಸಂಪೂರ್ಣ ಅನುಕೂಲತೆಯು ಇರುವಲ್ಲಿ ಬೇಕಾದಂತೆ ಹೋಗಿ ಇರ್ರಿ. ಹೊರಡಿರಿ. ನಡೆಯಿರಿ. ಇದರಲ್ಲಿ ನಿಮ್ಮ ಮತ್ತು ಅಖಿಲ ಮನುಷ್ಯ ಜಾತಿಯು ಕಲ್ಯಾಣವಿರುತ್ತದೆ.

(೨೨೬) ಕರ್ತವ್ಯದ ಸಲುವಾಗಿ ಕಾರಾಗೃಹದ ಗೋಡೆಗಳನ್ನು ನೋಡುವ ಪ್ರಸಂಗವು ಬಂದರೂ ಕರ್ತವ್ಯದಿಂದ ವಿಮುಖವಾಗುವದು ಅತ್ಯಂತ ನೀಚತನವು ಮತ್ತು ಮೂರ್ಖತನವು ಇರುತ್ತದೆ.

(೨೨೭) ವಿಷಯುವೆಂಬ ಕೆಸರಿನಲ್ಲಿ ಹೊರಳಾಡಿಸುವ ಪ್ರಪಂಚದ ಆಸಕ್ತಿಯನ್ನೂ, ಅಧೋಗತಿಗೆ ಮುಟ್ಟಿಸುವ ದ್ವೇಷಬುದ್ಧಿಯನ್ನೂ ಇಲ್ಲದಂತೆ ಮಾಡಿ, ರಾಗದ್ವೇಷಾದಿಗಳನ್ನು ದಾಟಿದವರಾಗಿ, ನಿಮ್ಮ ಆಧ್ಯಾತ್ಮಿಕ ಐಶ್ವ

ರ್ಯವನ್ನೂ ತೇಜಸ್ಸನ್ನೂ ಪ್ರಕಟ ಮಾಡಿರಿ. ಅಂದರೆ ಯಕ್ಷ, ಗಂಧರ್ವ, ಕಿನ್ನರರಷ್ಟೇ ಅಲ್ಲ, ಪ್ರತ್ಯಕ್ಷ ದೇವತೆಗಳು ನಿಮ್ಮ ಸೇವಕರಾಗಿ ನಿಮ ಮುಂದೆ ಕೈ ಮುಗಿದುಕೊಂಡು ನಿಂತು ನಿಮ್ಮ ಸೇವೆಯನ್ನು ಮಾಡುವರು.

(೨೨೮) ಸತ್ಯದ ವೈಭವವು ಮತ್ತು ಸತ್ಯದ ಸೌಂದರ್ಯವು ಒಮ್ಮೆ ನಮ್ಮ ಬುದ್ಧಿಗೆ ಒಪ್ಪಿಗೆಯಾದರೆ ಅವು ನಮ್ಮ ಮನಸ್ಸಿನಲ್ಲಿ ಸ್ಥಿರವಾಗಿ ನಿಂತು ಕೊಳ್ಳುವವು. ಹಿಂದುಗಡೆ ಅವುಗಳು ಅಲ್ಲಿಂದ ಚಲಿಸುವದು ಶಕ್ಯವಲ್ಲ.

(೨೨೯) ಯಾವದೊಂದು ವಸ್ತುವಿನ ಒಳ್ಳೇ ಅಥವಾ ಕೆಡಕು ಉಪ ಯೋಗವನ್ನು ಮಾಡುವದು ಅದನ್ನು ಮಾಡುವವರ ಮೇಲೆ ಅವಲಂಬಿಸಿರು ತ್ತದೆ. ಅದರ ಕೆಡಕು ಉಪಯೋಗವನ್ನು ಯಾವನಾದರೂ ಮಾಡಿದರೆ ಅದ ರಿಂದ ಆ ವಸ್ತುವಿನ ಯೋಗ್ಯತೆಯು ಕಡಿಮೆಯಾಗುವದಿಲ್ಲ. ಆತ್ಮಶಕ್ತಿಯು ಅಥವಾ ಮಾಯೆಯು ವಸ್ತುತಃ ನಮಗೆ ಉಪಕಾರವನ್ನು ಮಾಡುತ್ತದೆ. ಆದರೆ ನಾವು ಅದರ ದುರುಪಯೋಗವನ್ನು ಮಾಡುವದರಿಂದ ನಾವು ಸ್ವರ್ಗ ವನ್ನು ಸಹ ನರಕವಾಗಿ ಮಾಡುತ್ತೇವೆ.

(೨೩೦) ಭೂಗರ್ಭ ಶಾಸ್ತ್ರವು ಪೃಥ್ವಿಯ ಹೊಟ್ಟೆಯಲ್ಲಿಯ ಖನಿಜ ದ್ರವ್ಯಗಳ ವಿಷಯವಾಗಿ ವಿವೇಚನ ಮಾಡುತ್ತದೆ. ವನಸ್ಪತಿ ಶಾಸ್ತ್ರವು ವನ ಸ್ಪತಿಗಳ ಮತ್ತು ಅವುಗಳ ಗುಣಧರ್ಮಗಳ ವಿಷಯವಾಗಿ ವಿವೇಚನ ಮಾಡು ತ್ತದೆ. ಖಗೋಲ ಜೋತಿಷ್ಯ ಶಾಸ್ತ್ರವು ಭೂಲೋಕದಿಂದ ಮತ್ತು ಮನುಷ್ಯ ಸೃಷ್ಟಿಯಿಂದ ಅತ್ಯಂತ ದೂರವಿರುವ ಆಕಾಶದೊಳಗಿನ ಜ್ಯೋತಿಗಳ ಮತ್ತು ಅವುಗಳ ಭ್ರಮಣಗತಿಯ ವಿಷಯವಾಗಿ ವಿವೇಚನ ಮಾಡುತ್ತದೆ. ಮಾನಸ ಶಾಸ್ತ್ರವು ಮನಸ್ಸಿನ ಬೇರೆ ಬೇರೆ ವ್ಯಾಪಾರಗಳ ವಿಷಯವಾಗಿ ನಿಯಮಗಳನ್ನು ಶೋಧಿಸುತ್ತದೆ. ಅರ್ಥಶಾಸ್ತ್ರ, ಇತಿಹಾಸಶಾಸ್ತ್ರ ಇತ್ಯಾದಿಗಳು ಮನುಷ್ಯರ ಹಾಗೂ ಮನುಷ್ಯ ಸಂಘಗಳಾದ ರಾಷ್ಟ್ರಗಳ ಬೇರೆ ಬೇರೆ ಚಟುವಟಿಕೆಗಳನ್ನು ನಿರೀಕ್ಷಣ ಮಾಡುತ್ತವೆ. ಗಣಿತದಂಥ ಶಾಸ್ತ್ರಗಳು ವ್ಯವಹಾರಕ್ಕೆ ಆಧಾರ ಭೂತವಾದ ವಿಷಯಗಳ ನಿಯಮಗಳನ್ನು ಗೊತ್ತುಪಡಿಸುತ್ತವೆ.

(೨೩೧) ಗಹನ ವಿಚಾರದಲ್ಲಿ ಮನಸ್ಸು ನಿಮಗ್ನವಾಗುವದು ಕಾರ್ಯ ಸಿದ್ಧಿಯ ದೃಷ್ಟಿಯಿಂದ ಲಾಭಕರವಿರುತ್ತದೆ. ಆದರೆ ಅದರಿಂದ ಮಿದುಳುಗಳ

ಮೇಲೆ ಭಾರವು ಬೀಳುವದರಿಂದ ಶಕ್ತಿಯು ಕ್ಷೀಣವಾಗುತ್ತದೆ. ಒಂದು ಕುದುರೆಯ ಮೇಲೆ ಅದು ಹೊರುವದಕ್ಕಿಂತ ಹೆಚ್ಚು ಭಾರವನ್ನು ಹಾಕಿದರೆ ಅದು ಹೇಗೆ ತಡೆದುಕೊಳ್ಳಲಾರದೋ ಹಾಗೆ ಮಿದುಳುಗಳಮೇಲೆ ಅತಿಶಯ ಭಾರವನ್ನು ಹಾಕಿದರೆ ಅವು ಅದನ್ನು ತಡೆಯಲಾರವು.

(೨೩೨) ಕುದುರೆಯ ಮೇಲೆ ಹಾಕಿದ ಭಾರವನ್ನು ಪೂರ್ಣವಾಗಿ ತೆಗೆದುಬಿಟ್ಟು ಅದಕ್ಕೆ ಮೇಲಿಂದಮೇಲೆ ವಿಶ್ರಾಂತಿಕೊಟ್ಟರೆ ಅದಕ್ಕೆ ಭಾರವೇನೂ ತೋರದೆ ಅದು ವೇಗದಿಂದ ಓಡುವದು. ಇದೇ ನ್ಯಾಯದಿಂದ ನಿಮ್ಮ ಜೀವಶಕ್ತಿಯು ಬಹುಕಾಲದ ತನಕ ತಡೆಯಬೇಕಾದರೆ ಮತ್ತು ನಿಮ್ಮ ಪ್ರಕೃತಿಯು ಸುದೃಢವಾಗಿ ಇರಬೇಕೆಂದು ನಿಮ್ಮ ಅಪೇಕ್ಷೆಯಿದ್ದರೆ ನಿಮ್ಮ ಮಿದುಳಿನ ಮೇಲೆ ಚಿಂತೆಯ ಭಾರವನ್ನು ಬಹಳ ಹಾಕಬೇಡಿರಿ.

(೨೩೩) ಸರ್ವತ್ರ ಈಶ್ವರನು ಇರುತ್ತಾನೆ. ಸರ್ವತ್ರ ರಾಮನು ಇರುತ್ತಾನೆ. ನಾನೇ ಎಲ್ಲ ಕಡೆಗೆ ನಟಿಸುತ್ತೇನೆ. ಒಂದು ಕಡೆಗೆ ಶ್ರೀಮಂತನಾಗಿ ಸುಖವನ್ನು ಭೋಗಿಸುತ್ತೇನೆ. ಇನ್ನೊಂದು ಕಡೆಗೆ ಕತ್ತಲ ಕೋಣೆಯಲ್ಲಿ ಕುಳಿತು ದುಃಖವನ್ನು ಭೋಗಿಸುತ್ತಾನೆ. ಸುಂದರನೂ ನಾನೇ; ಕುರೂಪನೂ ನಾನೇ; ಪುಷ್ಪವಾಟಿಕೆಯಲ್ಲಿ ಇರುವವನೂ ನಾನೇ; ನಿರ್ಜನ ಅರಣ್ಯದಲ್ಲಿ ಇರುವವನೂ ನಾನೇ; ಇಂಥ ಸ್ಥಿತಿಯಲ್ಲಿ ನೀವು ಯಾರಿಗೆ ದೋಷಕೊಡುತ್ತೀರಿ? ನನ್ನ ಮೇಲೆ ದೋಷಾರೋಪ ಮಾಡುವ ಮನುಷ್ಯನಾದರೂ ನಾನೇ ಅಲ್ಲವೇ?

(೨೩೪) ನಿಮಗೆ ಅರಸನ ದರ್ಶನಕ್ಕೆ ಹೋಗುವದಿದ್ದರೆ ನೀವು ಬಹುಮೌಲ್ಯವುಳ್ಳ ಬಟ್ಟೆಗಳನ್ನು ಧರಿಸಿ ಅವನ ಮುಂದೆ ಹೋಗಬೇಕಾಗುತ್ತದೆ. ಇದೇ ನ್ಯಾಯದಂತೆ ನಿಮಗೆ ಈಶ್ವರನ ದರ್ಶನವಾಗಬೇಕಾದರೆ ನೀವು ನಿರಿಚ್ಛ ಮನಸ್ಸಿನಿಂದ ಅಂದರೆ ನಿಷ್ಕಾಮ ಬುದ್ಧಿಯಿಂದ ಅವನ ಧ್ಯಾನವನ್ನು ಮಾಡಬೇಕಾಗುತ್ತದೆ. ನಿಮ್ಮಲ್ಲಿ ಯಾವ ಇಚ್ಛೆಯಾಗಲಿ, ಕಲ್ಪನೆಯಾಗಲಿ ಇರಬಾರದು.

(೨೩೫) ಶುದ್ಧ ಆಚರಣವಿಲ್ಲದ ಮನುಷ್ಯನು ಎಷ್ಟು ದೊಡ್ಡ ಉಪದೇಶದ ಮಾತು ಹೇಳಿದಾಗ್ಯೂ ದುರ್ಜನನು ಸಜ್ಜನನಾಗಲಾರನು. ಶುದ್ಧ ಆಚರಣವಿರುವ ಮನುಷ್ಯನು ಮೌನದಿಂದ ಇದ್ದಾಗ್ಯೂ ಅವನ ಆಚರಣವನ್ನು ನೋಡಿ ಜನರು ಬುದ್ಧಿಗಲಿಯುವರು.

(೨೩೬) ಪರಮೇಶ್ವರನು ಸರ್ವವ್ಯಾಪಿಯು ಇರುತ್ತಾನೆ. ಆದರೆ ನಿಮಗೆ ಆತ್ಮಕೃಪೆಯು ಇದ್ದರೆ ಅವನು ಸ್ವರ್ಗದಲ್ಲಿರಲಿ, ವೈಕುಂಠದಲ್ಲಿರಲಿ, ಬೇಕಾದಷ್ಟು ದೂರ ಇರಲಿ, ಅವನಿಗೆ ನೀವು ನಿಮ್ಮ ಭಕ್ತಿವೈರಾಗ್ಯಗಳಿಂದ ನಿಮ್ಮ ಸಮೀಪಕ್ಕೆ ಬರುವಂತೆ ಮಾಡುತ್ತೀರಿ.

(೨೩೭) ಎಲೈ ಬುದ್ಧಿವಂತ ಮನುಷ್ಯನೇ! ನೀನು ನಿನ್ನಲ್ಲಿರುವ ಆತ್ಮಬಲವನ್ನು ಪ್ರಕಟ ಮಾಡಿದರೆ ಪ್ರತ್ಯಕ್ಷ ಪರಮೇಶ್ವರನು ಸಹ ಸಂತುಷ್ಟನಾಗುವನು.

(೨೩೮) ಎಲೈ ವಸಂತ ಋತುವಿನಲ್ಲಿ ಮೊದಲಿಗೆ ಅರಳುವ ಪುಷ್ಪವೇ! ನೀನು ನಿನ್ನನ್ನು ನೋಡಿಕೊಂಡು ಸಂತುಷ್ಟನಾಗಿರು. ನೀನು ಈ ಆತ್ಮವಿಷಯದ ಕರ್ತವ್ಯವನ್ನು ಮಾಡಿದರೆ ಸಾಕು; ನಿನ್ನ ಎಲ್ಲ ಕರ್ತವ್ಯಗಳು ತಮ್ಮಿಂದ ತಾವೇ ಜರಗುವವು. ಹಾಗೂ ನಿನ್ನನ್ನು ನೋಡಿ ಮನುಷ್ಯ ಪ್ರಾಣಿಗಳಿಷ್ಟೇ ಅಲ್ಲ, ಕ್ರಿಮಿಕೀಟಕಾದಿಗಳನ್ನು ಆರಂಭ ಮಾಡಿಕೊಂಡು ಪಂಚ ಮಹಾಭೂತಗಳಲ್ಲಿ ಹಿರಿಯದಾದ ವಾಯುವು, ಕಡೆಯದಾದ ವಾಯುವು ಸಹ ಸಂತುಷ್ಟವಾಗುವವು.

(೨೩೯) ನಿಮ್ಮ ಮನಸ್ಸಿನಲ್ಲಿ ಹೂವಿನ ಕಲ್ಪನೆಯು ಬಂದು ನಿಮ್ಮ ಅಂತಃಕರಣದ ನೇತ್ರಗಳ ಮುಂದೆ ಹೂವು ಕಾಣಿಸಲಿಕ್ಕೆ ಹತ್ತಿದ ಕೂಡಲೆ ನಿಮಗೆ ಆನಂದವಾಗುತ್ತದೆ. ಆದರೆ ಹೂವಿನ ಬದಲಾಗಿ ವಿರಹದಿಂದ ವ್ಯಾಕುಲವಾದ ಚಕ್ರವಾಕ ಪಕ್ಷಿಯು ನೆನಪಾದ ಕೂಡಲೆ ನಿಮ್ಮ ಚಿತ್ತವು ಉದಾಸೀನವಾಗುವದು. ದುಃಖದ ನೆನಪು ಅಥವಾ ದುಃಖದ ವಿಚಾರವು ನಿಮ್ಮ ಮನಸ್ಸಿಗೆ ಯಾವಾಗಲು ಬಹಳ ಕಷ್ಟವನ್ನು ಕೊಡುವದು. ನೀವು ಎಲ್ಲರ ಸುಖದುಃಖಗಳ ಬಗ್ಗೆ ವಿಚಾರ ಮಾಡಿ ಎಲ್ಲರ ಅಭೀಷ್ಟಚಿಂತನಮಾಡಹತ್ತಿದರೆ ನಿಮ್ಮಲ್ಲಿ ಸರ್ವಾತ್ಮಭಾವವು ಬಂದೇಬರುವದು.

(೨೪೦) ನೀವು ನಿಮ್ಮ ಉನ್ನತಿಯನ್ನು ಮಾಡಿಕೊಳ್ಳಬೇಕಾದರೆ ಮತ್ತು ಸ್ವಂತ ಕರ್ತವ್ಯವನ್ನು ನಿಮಗೆ ಮಾಡಬೇಕಾದರೆ ನೀವು ಎರಡನೇಯುವರ ದೋಷಗಳನ್ನು ಅರಿಸುವ ನಡತೆಯನ್ನು ಬಿಟ್ಟುಬಿಡಿರಿ. ನಿಮ್ಮ ಮನಸ್ಸಿನ ಮುಂದೆ ಎರಡನೇಯುವರ ಸದ್ಗುಣಗಳ ಹೊರತಾಗಿ ಯಾವ ವಿಚಾರಗಳನ್ನೂ

ತರಬೇಡಿರಿ. ನೀವು ಗುಮುಟದ ಕೆಳಗೆ ನಿಂತು ಉಚ್ಚರಿಸುವ ಶಬ್ದಗಳ ಪ್ರತಿ ಧ್ವನಿಯು ನಿಮ್ಮ ಕಿವಿಗೆ ಬೀಳದೆ ಎಂದಿಗೂ ಇರಲಾರದು.

(೨೪೧) ಆತ್ಮವಿಶ್ವಾಸದಿಂದ ಕಾರ್ಯಗಳನ್ನು ಮಾಡುವವರಿಗೆ ಪರಮೇಶ್ವರನು ಯಶಸ್ಸನ್ನು ಕೊಡಲಿಕ್ಕೆ ಯಾವಾಗಲು ಸಿದ್ಧನಿರುತ್ತಾನೆ. ಮನುಷ್ಯನು ಪೂರ್ಣ ಅಧಿಕಾರಿಯಾದ ಕೂಡಲೆ ಅವನಿಗೆ ಸಹಾಯ ಮಾಡಲಿಕ್ಕೆ ಪರಮೇಶ್ವರನು ಅವನನ್ನು ಹುಡುಕುತ್ತ ಅವನ ಬಾಗಿಲಿಗೆ ಬರುತ್ತಾನೆ.

(೨೪೨) ಒಬ್ಬ ಸ್ತ್ರೀಯು ತನ್ನ ಪ್ರಕಾಶನಚಿತ್ರವನ್ನು ತೆಗೆಸಿಕೊಳ್ಳಲಿಕ್ಕೆ ಒಬ್ಬ ಪ್ರಕಾಶಲೇಖಕನ (Photographer) ಕಡೆಗೆ ಹೋದಳು. ಆಗ ಆ ಪ್ರಕಾಶಲೇಖಕನು ಅವಳ ಮುಂದೆ ತನ್ನ ಯಂತ್ರವನ್ನು (Camera) ಇಟ್ಟು ಆ ಯಂತ್ರದೊಳಗೆ ಒಂದು ಉತ್ತಮವಾದ ಪ್ರತಿಮಾಗ್ರಾಹಕ ಕಾಜಿನ ಪಟ (Slideglass) ವನ್ನು ಇಟ್ಟನು. ಆದರೆ ಆ ಪಟದಲ್ಲಿ ಆ ಸ್ತ್ರೀಯ ಮೋರೆಯಮೇಲೆ ಮೈಲಿಯ ಕಲೆಗಳು ಎದ್ದವು. ನಿಜವಾಗಿ ಆ ಸುಂದರಾಂಗಿಯ ಮೋರೆಯ ಮೇಲೆ ಏನೂ ಕಲೆಗಳು ಕಾಣಿಸುತ್ತಿದ್ದಿಲ್ಲ. ಹೀಗಿದ್ದು ಆ ಕಲೆಗಳು ಮೂಡಲಾಗಿ ಅವನು ತನ್ನ ಕಾಜಿನ ಪಟದ ಕಡೆಗೆ ಏನಾದರೂ ದೋಷವಿರಬಹುದೆಂದು ತಿಳಿದು ಅದನ್ನು ತೆಗೆದು ಇನ್ನೊಂದು ಕಾಜಿನ ಪಟವನ್ನು ಹಾಕಿದನು. ಆದರೆ ಅದರ ಮೇಲೂ ಮುಂಚಿನಂತೆಯೇ ಮೈಲಿಯ ಕಲೆಗಳು ಮೂಡಿದವು. ಆಗ ಅವನು ಬೇಸತ್ತು—"ಈವೊತ್ತು ಹವೆಯು ಸರಿಯಾಗಿ ಇರುವಂತೆ ಕಾಣುವದಿಲ್ಲ. ಆದುದರಿಂದ ಇನ್ನೊಮ್ಮೆ ಬನ್ನಿರಿ. ಅಂದರೆ ನಿಮ್ಮ ಪ್ರಕಾಶಲೇಖನವನ್ನು ಸರಿಯಾಗಿ ತೆಗೆದುಕೊಳ್ಳಲಿಕ್ಕೆ ಆಗುವದು" ಎಂದು ಹೇಳಿ ಅವಳನ್ನು ಕಳಿಸಿಕೊಟ್ಟನು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಅವಳಿಗೆ ಮೈಲಿಗಳೆದ್ದವು. ಇದಕ್ಕೆ ಕಾರಣವೇನೆಂದು ಶೋಧ ಮಾಡಲಾಗಿ ಕೆಳಗೆ ಬರೆದ ಕಾರಣವು ಗೊತ್ತಾಯಿತು. ಅದೇನಂದರೆ:—ಅವಳಿಗೆ ಅವಳ ತಂಗಿಯ ಕಡೆಯಿಂದ—"ನನಗೆ ಮೈಲಿಗಳು ಎದ್ದಿದ್ದು ನಾನು ಹವೆಯನ್ನು ಬದಲಿಸುವದಕ್ಕಾಗಿ ನಿನ್ನ ಕಡೆಗೆ ಒಂದೆರಡು ದಿವಸಗಳಲ್ಲಿ ಬರುತ್ತೇನೆ" ಎಂಬ ಒಂದು ಪತ್ರವು ಬಂದಿತ್ತು. ಆ ಪತ್ರದ ಲಖೋಟೆಯನ್ನು ಅವಳು ತನ್ನ ಉಗುಳಿನಿಂದ ಮುಚ್ಚಿದ್ದಳು. ಇದರಿಂದ ಅವಳ ಮೈಯೊಳಗಿನ ಮೈಲಿಯ ರಸವು ಆ

ಪತ್ರದ ಲಖೋಟಿಗೆ ಹತ್ತಿತ್ತು. ಆ ಲಖೋಟಿಯನ್ನು ಇವಳು ಮುಟ್ಟಿ ತೆಗೆದ ಕಾರಣ ಆ ಸಂಸರ್ಗ ದೋಷದಿಂದ ಇವಳಿಗೆ ಸಹ ಮೈಲಿಗಳು ಎದ್ದು ಇವಳೂ ಬೇನೆಬಿದ್ದಳು. ಒಂದೆರಡು ದಿವಸಗಳಲ್ಲಿ ಹೊರಬೀಳತಕ್ಕದ್ದಿದ್ದ ಕಲೆಗಳು ಫೋಟೋಗ್ರಾಫರನ ಪಟದ ಮೇಲೆ ಮುಂಚಿತವಾಗಿ ಮೂಡಿದವು. **ಸಾರಾಂಶ- ಸ್ವಲ್ಪ ದಿವಸಗಳ ತರುವಾಯ ಆಗತಕ್ಕದ್ದಿರುವ ಸಂಗತಿಗಳು ಪೂರ್ವಚಿಹ್ನಗಳಿಂದ ತಿಳಿದುಬರುತ್ತವೆ.**

(೨೪೩) ನಿಮ್ಮ ಶ್ರೀಮಂತಿಕೆಯು ನಿಮ್ಮ ದ್ರವ್ಯದ ಚೀಲದ ಮೇಲೆ ಅವಲಂಬಿಸಿರದೆ ನಿಮ್ಮ ತ್ಯಾಗದ ಮೇಲೆ ಅವಲಂಬಿಸಿರುವದು. ಮನುಷ್ಯನು ಮುಂಜಾನೆಯಿಂದ ಸಂಜೆಯುವರೆಗೆ ಸುಮ್ಮನೆ ಕೂಡ್ರದೆ ಏನಾದರೂ ಉದ್ಯೋಗವನ್ನು ಅಥವಾ ಚಟುವಟಿಕೆಯನ್ನು ಮಾಡುವದು ತನ್ನ ಸ್ವಂತದ ವಿಷಯವಾಗಿ ಅಲ್ಲದೆ ಬೇರೆಯುವರ ವಿಷಯುವಾಗಿಯೇ ಇರುವದು.

(೨೪೪) ನಿಜವಾದ ಜ್ಞಾನವು ಮನುಷ್ಯನ ಹೃದಯುದೊಳಗಿಂದ ಉಗಮವಾಗುತ್ತದೆ. ಅದು ಹೊರಗಿನ ಗ್ರಂಥಗಳಿಂದ ಅಥವಾ ಇತರ ವಸ್ತುಗಳಿಂದ ಉಗಮವಾಗುವದಿಲ್ಲೆಂದು ಚನ್ನಾಗಿ ಲಕ್ಷ್ಯದಲ್ಲಿಡರಿ.

(೨೪೫) ' ಈಶ್ವರನೇ, ಹೀಗೆ ಮಾಡು, ಹಾಗೆ ಮಾಡು ' ಈ ಪ್ರಕಾರ ಅನ್ನುವದೆಂದರೆ ಈಶ್ವರನು ಒಬ್ಬ ಸಾಮಾನ್ಯ ವ್ಯಕ್ತಿಯಿರುತ್ತಾನೆಂದು ತಿಳಿದು ಅವನನ್ನು ಆರೋಪಿತನಂತೆ ನ್ಯಾಯುಮಂದಿರಕ್ಕೆ ಕರೆಸಿ ಅವನಿಗೆ ' ನಿನ್ನ ಜವಾಬು ಕೊಡು ' ಎಂದು ಅಪ್ಪಣೆ ಮಾಡಿದಂತೆ ಆಗುವದು! ಈಶ್ವರನು ಈ ಪ್ರಕಾರ ಮಾಡಲಿಕ್ಕೆ ಯಃಕಶ್ಚಿತ ಮನುಷ್ಯನೇ?

(೨೪೬) ನಿಮ್ಮ ಕಾಲೊಳಗೆ ಮುಳ್ಳು ಮುರಿದು ಅದರ ಸುತ್ತಲು ಹುಣ್ಣು ಆಯಿತೆಂದರೆ ಅದನ್ನು ಹೊರಗೆ ತೆಗೆಯುಲಿಕ್ಕೆ ಇನ್ನೊಂದು ಮುಳ್ಳು ನಿಮಗೆ ಸಿಕ್ಕೇಸಿಕ್ಕುವದು. ಇದರಂತೆ ನಿಮ್ಮ ಮನಸ್ಸಿನಲ್ಲಿ ಯಾವದಾದರೂ ಸದಪೇಕ್ಷೆಯು ಹುಟ್ಟಿ ಅದನ್ನು ಪೂರ್ಣಮಾಡುವ ಬಗ್ಗೆ ನಿಮಗೆ ನಿದಿಧ್ಯಾಸವು ಹತ್ತಿದ್ದರೆ ನೀವು ಆಸಕ್ತಿಯನ್ನು ಬಿಟ್ಟು ಕಾರ್ಯ ಮಾಡಿರಿ. ಅಂದರೆ ನಿಜವಾಗಿ ನಿಮ್ಮ ಕಾರ್ಯವು ಸಿದ್ಧಿಯಾಗುವದು.

(೨೪೭) ಯಾಚನೆಯನ್ನು ಮಾಡಿದ ಕೂಡಲೆ ಧಿಃಕಾರವು ಹುಟ್ಟು ವದೆಂದು ತಿಳಿಯಿರಿ.

(೨೪೮) ಯಾಚನೆಯನ್ನು ಮಾಡಿದರೆ ನಿಮಗೆ ಏನೂ ಸಿಗುವದಿಲ್ಲ; ತ್ಯಾಗವೃತ್ತಿಯಿಂದ ನಡೆದರೆ ನಿಮಗೆ ಅಮರಪುರವು ಸಹ ಸಿಗುತ್ತದೆ.

(೨೪೯) ಅಂತಃಕರಣಶುದ್ಧಿಯೆಂದರೆ ನಿರಾಸಕ್ತತೆಯು. ತ್ಯಾಗದಲ್ಲಿ ಇದಕ್ಕೂ ಹೆಚ್ಚಿಗೆ ಏನೂ ಇರುವದಿಲ್ಲ.

(೨೫೦) ಅಹಂಕಾರ, ಆತ್ಮಶ್ಲಾಘನೆ ಮತ್ತು ಸ್ವಾರ್ಥ ಇವು ಆತ್ಮದ ಅವನತಿಗೆ ಕಾರಣಗಳು. ಈ ಮೂರನ್ನೂ ಬಿಡುವದೇ ಆತ್ಮೋನ್ನತಿಯ ಸಾಧನವು.

(೨೫೧) ಸ್ವಾರ್ಥದ ಕಡೆಗೆ ದೃಷ್ಟಿಯನ್ನಿಡದೆ ನಿಃಸ್ವಾರ್ಥಬುದ್ಧಿ ಯಿಂದ ಕರ್ತವ್ಯವನ್ನು ಮಾಡಿದರೆ ಶ್ರೇಯಸ್ಸು ತಾನಾಗಿ ಬರುವದು.

(೨೫೨) ನಿಮ್ಮ ಸಂಸಾರಿಕ ಮನೆಯಕಿಂತ ನಿಮ್ಮ ಆತ್ಮರೂಪೀ ಮನೆ ಯು ಬಹಳ ಗಟ್ಟಿಯಾದದ್ದು ಮತ್ತು ಬಹಳ ದಿವಸ ಇರುವಂಥಾದ್ದು. ಆದು ದರಿಂದ ನೀವು ಸಂಸಾರಿಕ ಮನೆಯನ್ನು ಬಿಟ್ಟು ಆತ್ಮರೂಪೀ ಮನೆಯಲ್ಲಿಯೇ ಇರಲಿಕ್ಕೆ ಹತ್ತಿರಿ.

(೨೫೩) ಪರಮೇಶ್ವರನ ನಾಮವನ್ನು ಜಪಿಸದೆ ಇರುವ ಮನುಷ್ಯನ ಜನ್ಮವು ಕತ್ತೆ, ನಾಯಿ ಮತ್ತು ಹಂದಿಗಳಂತೆ ವ್ಯರ್ಥವಾದದ್ದು.

(೨೫೪) ಚಿತ್ತಶುದ್ಧಿಯಿಲ್ಲದವರಿಗೆ ವಿಜಯಶ್ರೀಯು ಎಂದೂ ಮಾಲೆ ಯನ್ನು ಹಾಕುವದಿಲ್ಲ.

(೨೫೫) ನೀವಾಗಿಯೇ ಜನಸಂಖ್ಯೆಯ ಅಭಿವೃದ್ಧಿಯನ್ನು ಮಾಡ ದಂತೆ ಪ್ರಯತ್ನಮಾಡಿರಿ. ಇಲ್ಲದಿದ್ದರೆ ಮಹರ್ಷಿ ವಸಿಷ್ಠರು ಹೇಳಿದಂತೆ ಮೃತ್ಯುವು ಕ್ರೂರತನದಿಂದ ಮಾರಿಕಾಬೇನೆ, ದುಷ್ಕಾಳ, ಭೂಕಂಪ ಮತ್ತು ಯುದ್ಧ ಇವುಗಳ ರೂಪದಿಂದ ಜನರ ಸಂಹಾರವನ್ನು ಮಾಡುವದು. ಆದುದ ರಿಂದ ಸೃಷ್ಟಿಯಲ್ಲಿ ಇಂಥ ಕ್ರೂರ ಸಂಹಾರವು ಆಗಬಾರದೆಂದು ಅಪೇಕ್ಷಿಸುವ ವರು ಬ್ರಹಚರ್ಯ ಮೊದಲಾದ ಪವಿತ್ರ ಆಚರಣವನ್ನು ಕೈಕೊಳ್ಳತಕ್ಕದ್ದು.

(೨೫೬) ಈ ೨೧ ನೇ ಶತಕದಲ್ಲಿ ನೀವು ನಿಮ್ಮ ವಿವೇಕಶಕ್ತಿಯನ್ನು ಜಾಗ್ರತವಿಟ್ಟು ವ್ಯಾಖ್ಯಾತನ ವೈಯುಕ್ತಿಕ ಯೋಗ್ಯತೆ ಮತ್ತು ಅವನು ಮಾಡುವ ಉಪದೇಶ ಇವುಗಳನ್ನು ಚನ್ನಾಗಿ ನಿರೀಕ್ಷಣ ಮಾಡಲಿಕ್ಕೆ ಕಲಿಯಿರಿ. ವ್ಯಾಖ್ಯಾತನು ದೊಡ್ಡ ಯೋಗ್ಯತೆಯುವನಿದ್ದಾಗ್ಯೂ ಅವನ ಉಪದೇಶವು ಯೋಗ್ಯವಿಲ್ಲದಿದ್ದರೆ ಅದನ್ನು ಮಾನ್ಯಮಾಡಬೇಡಿರಿ. ಅದು ಯೋಗ್ಯವಿದ್ದರೆ ವ್ಯಾಖ್ಯಾತನು ಕಡಿಮೆ ಯೋಗ್ಯತೆಯುವನಿದ್ದರೂ ಅವನ ಉಪದೇಶವನ್ನು ಶಿರಸಾಮಾನ್ಯ ಮಾಡಿರಿ. ಕಮಲವು ಕೆಸರಿನಲ್ಲಿ ಹುಟ್ಟಿದಾಗ್ಯೂ ಅದನ್ನು ನೀವು ಸ್ವೀಕಾರ ಮಾಡುವದಿಲ್ಲವೇ?

(೨೫೭) ಸತ್ತ ದನಗಳ ಎಲವು ಮುಟ್ಟಲಿಕ್ಕೆ ಅಂಜುವದು ಮತ್ತು ಯಾವದಾದರೂ ದುರ್ಗಂಧಿಯ ಪದಾರ್ಥದಿಂದ ಏನಾದರೂ ಒಳ್ಳೇ ಉಪಯೋಗಮಾಡಿಕೊಳ್ಳಲಿಕ್ಕೆ ಬರುತ್ತಿದ್ದ ಪಕ್ಷದಲ್ಲಿ ಅದನ್ನು ಮಾಡಿಕೊಳ್ಳದೆ ದೂರ ಓಡುವದು ನಮ್ಮ ದಾರಿದ್ರ್ಯದ ಮಹತ್ವದ ಕಾರಣವಿರುತ್ತದೆ.

(೨೫೮) ಎರಡನೆಯುವರ ದೋಷಗಳನ್ನು ಅರಿಸುವ ಪ್ರವೃತ್ತಿಯು ಯಾವ ರಾಷ್ಟ್ರದಲ್ಲಿ ಪ್ರಬಲವಾಗಿರುತ್ತದೋ ಆ ರಾಷ್ಟ್ರದ ಜನರೊಳಗೆ ಐಕ್ಯ ಮತ್ತು ಪ್ರೇಮ ಇವುಗಳು ಹುಟ್ಟುವದು ಮತ್ತು ಅವರ ಉತ್ಕರ್ಷವಾಗುವದು ಅಸಂಭವವು.

(೨೫೯) ಜನರೊಳಗಿನ ದೋಷಗಳನ್ನು ಕೆದರಿ ತೆಗೆಯುವದರಿಂದ ಮತ್ತು ಅವರ ಮೇಲೆ ಬಿಟ್ಟೂಬಿಡದೆ ಟೀಕೆಯನ್ನು ಮಾಡುವದರಿಂದ ಮನುಷ್ಯನು ಎಂದಿಗೂ ಸುಧಾರಿಸಲಾರನು. ಇದು ಸುಧಾರಣೆಯ ವಿಧಾಯಕ ಉಪಾಯವಲ್ಲ; ವಿಧ್ವಂಸಕ ಉಪಾಯವಿರುವದು. ಒಂದೇಸವನೆ ಟೀಕೆಯನ್ನು ಮಾಡುವದರಿಂದ ಮನುಷ್ಯನು ಬಹಳ ನಿರಾಶೆಯನ್ನು ಹೊಂದುತ್ತಾನೆ. ದೋಷೈಕ ದೃಷ್ಟಿಯನ್ನು ಬಿಟ್ಟು ಅವನ ಸದ್ಗುಣಗಳನ್ನು ಪ್ರಾಮುಖ್ಯವಾಗಿ ಮುಂದೆ ಇಟ್ಟುಕೊಂಡು ಅವುಗಳನ್ನು ಸಂವರ್ಧನ ಮಾಡಲಿಕ್ಕೆ ಉತ್ತೇಜನ ಕೊಡುವದೇ ಸುಧಾರಣೆಯ ನಿಜವಾದ ಮಾರ್ಗವಿರುತ್ತದೆ.

(೨೬೦) ಮೊದಲಿಗೆ ನೀವು ಜನರ ಪ್ರೇಮವನ್ನು ಸಂಪಾದಿಸಿರಿ. ಅನಂತರ ಅವರಿಗೆ ಬುದ್ಧಿಯ ಮಾತು ಹೇಳಿರಿ. ಬುದ್ಧಿಯು ನಿರಾಶೆಗೆ ಒಳಗಾದರೂ ಪ್ರೇಮವು ಯಶಸ್ವಿಯಾಗುತ್ತದೆ.

(೨೬೧) ಪ್ರೇಮರೂಪೀ ಜನಾರ್ದನನು ಒಮ್ಮೆ ನಿಮ್ಮ ಹೃದಯ ಮಂದಿರದಲ್ಲಿ ಪ್ರವೇಶ ಮಾಡಿ ಇರಲಿಕ್ಕೆ ಹತ್ತಿದ ಬಳಿಕ ನೀವು ಕಳ್ಳರ ಮತ್ತು ಮೋಸಗಾರರ ಹೆದರಿಕೆಯನ್ನು ಹಿಡಿಯಲಿಕ್ಕೆ ಕಾರಣವಿಲ್ಲ.

(೨೬೨) ಯಾವನು ತನ್ನ ಅಂತಃಕರಣದಲ್ಲಿ ಆತ್ಮಸೂರ್ಯನು ಉದಯವಾದ್ದರಿಂದ ಅಖಿಲ ಸೃಷ್ಟಿಯ ಮೇಲೆ ತನ್ನ ದಿವ್ಯ ಪ್ರೇಮದ ಕಿರಣಗಳನ್ನು ಹೊರಚಿಮ್ಮಿ ಅದನ್ನು ಉಜ್ವಲವಾಗಿ ಮಾಡಲು ಸಮರ್ಥನಾಗುತ್ತಾನೋ ಅವನು ನಿಜವಾದ ಮುಕ್ತನು.

(೨೬೩) ನಮ್ಮೆಲ್ಲರ ಅಂತಃಕರಣಗಳು ಒಮ್ಮೆ ಕೂಡಲಿ; ಅಂದರೆ ನಮ್ಮೆಲ್ಲರ ತಲೆಗಳೂ ಕೈಗಳೂ ತಾವೇ ಕೂಡುತ್ತವೆ.

(೨೬೪) ಹಿಂದುಸ್ಥಾನದಲ್ಲಿ ವ್ಯರ್ಥವಾಗಿ ಟೀಕೆಯನ್ನು ಮಾಡುವ ಪ್ರವೃತ್ತಿಯು ಕಡಿಮೆಯಾಗಿ, ಅದರ ಸ್ಥಳದಲ್ಲಿ ಗುಣಗ್ರಾಹಕತ್ವ, ಭ್ರಾತೃಭಾವ, ಎಲ್ಲರು ಕೂಡಿ ಕೆಲಸ ಮಾಡುವ ಗುಣ, ರಾಷ್ಟ್ರೀಯ ಕೆಲಸಗಳಲ್ಲಿ ಪರಸ್ಪರ ಸಹಾಯ ಮಾಡುವದು ಮತ್ತು ಸಹಕಾರದಿಂದ ನಡೆಯುವದು, ಪರಿಶ್ರಮ ಮಾಡಿ ಜ್ಞಾನ ಭಾಂಡಾರವನ್ನು ಬೆಳೆಸುವದು ಈ ಐದು ಗುಣಗಳನ್ನು ಮುಖ್ಯವಾಗಿ ಉತ್ಪನ್ನ ಮಾಡಬೇಕು.

(೨೬೫) **ರಾಮನ** ಅಭಿಪ್ರಾಯದ ಪ್ರಕಾರ ನಮ್ಮ ದೇಶದ ಜನರೊಳಗೆ ವ್ಯವಹಾರ ಜ್ಞಾನದ ಅಭಾವ ಮತ್ತು ದೇಶದ ಜನಸಂಖ್ಯೆಯು ಮಿತಿ ಮೀರಿ ಬೆಳೆದದ್ದು ಇವೆರಡೂ ನಮ್ಮ ಜನರೊಳಗಿನ ಜಗಳಕ್ಕೆ ಮುಖ್ಯ ಕಾರಣಗಳಿರುತ್ತವೆ.

(೨೬೬) ಹಳೇ ಸಾಂಪ್ರದಾಯಗಳೆಂಬ ರೆಂಟೆ ಕುಂಟೆಗಳನ್ನಿಡುವ ಸ್ಥಳದಿಂದ ರಾಷ್ಟ್ರರೂಪೀ ನೌಕೆಯನ್ನು ಜಗ್ಗಿಕೊಂಡು ಹೋಗುವದು ಯಾವಾಗಲು ಬಹಳ ಕಠಿಣವಿರುತ್ತದೆ.

(೨೬೭) ಮಾತಾಡಿರಿ! ನಿಮಗೆ ಯಾವ ಪದವಿಯನ್ನು ಸಂಪಾದಿಸುವ ಮನಸ್ಸುಂಟು? ಅರಸರ ಮುಂದೆ ಕೈ ಕಟ್ಟಿಕೊಂಡು ದುಡಿಯುವ ಆಳುಗಳಾಗಿಯೋ? ಕರ್ತೃತ್ವ ಶಾಲಿಗಳಾದ ವೀರರಾಗಿಯೋ?

(೨೬೭) ಮಾನವೀ ಜಾತಿಯ ಕಲ್ಯಾಣಕ್ಕಾಗಿ, ಸತ್ಯದ ಉತ್ಕರ್ಷಕ್ಕಾಗಿ, ಮತ್ತು ರಾಷ್ಟ್ರದ ಉನ್ನತಿಗಾಗಿ ಬಹು ಜನ ಸಮಾಜಕ್ಕೆ ನಾನಾತರದ ಪೀಡೆಯನ್ನೂ ಹಿಂಸೆಯನ್ನೂ ಅನುಭೋಗಿಸುವ ಪ್ರಸಂಗವು ಬಂದರೆ ಆದರಿಂದ ಯಾರಿಗೂ ವ್ಯಸನವಾಗಲಾರದು.

(೨೬೮) ನಾವು ನಮ್ಮ ಅವನತಿಯ ಬಗ್ಗೆ ಒಮ್ಮೊಮ್ಮೆ ಮುಸಲ್ಮಾನ ಅರಸರಿಗೆ ದೋಷ ಕೊಡುತ್ತೇವೆ; ಮತ್ತು ಒಮ್ಮೊಮ್ಮೆ ಇಂಗ್ಲಿಷ ಸರಕಾರಕ್ಕೆ ದೋಷ ಕೊಡುತ್ತೇವೆ; ಒಮ್ಮೊಮ್ಮೆ ನಮ್ಮ ಶಿಕ್ಷಣ ಪದ್ಧತಿಗೆ ದೋಷ ಕೊಡುತ್ತೇವೆ. ಇದು ಅಂಶತಃ ನಿಜವಿದ್ದರೂ ನಮ್ಮ ಅವನತಿಯ ಮುಖ್ಯ ಕಾರಣವು ನಮ್ಮಲ್ಲಿ ರೂಢವಾಗಿರುವ ಬಾಲವಿವಾಹವೇ ಇರುತ್ತದೆ. ನಾವು ವಧುವರರ ಜನ್ಮಪತ್ರಿಕೆಯನ್ನು ನೋಡುತ್ತೇವೆ; ಮುಹೂರ್ತವನ್ನು ನಿರ್ಣಯಿಸುತ್ತೇವೆ; ವೇದಮಂತ್ರಗಳ ಘೋಷವನ್ನು ಮಾಡುತ್ತೇವೆ. ಈ ಪ್ರಕಾರ ಎಷ್ಟೋ ಪವಿತ್ರ ವಿಧಿಗಳನ್ನು ಮತ್ತು ಸಮಾರಂಭಗಳನ್ನು ನಾವು ಮಾಡಿದಾಗ್ಯೂ ಅಲ್ಪವಯಿ ಹುಡುಗಹುಡುಗಿಯರ ಲಗ್ನವನ್ನು ಮಾಡುವದರಿಂದ ನಮ್ಮ ಗ್ರಹಮುಹೂರ್ತಗಳು ಮತ್ತು ಶುಭಸಮಾರಂಭಗಳು ನಮಗೆ ಶುಭಕರವಾಗುವ ಬದಲಾಗಿ ಅಶುಭಕರವಾಗುತ್ತವೆ. ಪಶುಗಳಿಗೆ ಸಹ ಲಾಂಛನಾಸ್ಪದವಾದ ಲಗ್ನಪದ್ಧತಿಯನ್ನು ನೋಡಿ ಆಕಾಶದಲ್ಲಿಯ ಗ್ರಹಗಳು ಗದಗದ ನಡುಗಿ ತಮ್ಮ ಸ್ಥಳಗಳನ್ನು ಬಿಟ್ಟು ಹೋಗುತ್ತವೆ. ನಮ್ಮ ಸ್ವಂತ ಹೊಟ್ಟೆಯನ್ನು ತುಂಬಿಕೊಳ್ಳುವ ಸಾಮರ್ಥ್ಯವಿಲ್ಲದೆ ಇರುವ ಅಲ್ಪವಯಿಗಳ ಲಗ್ನದ ಪ್ರಸಂಗದಲ್ಲಿ ವೇದಮಂತ್ರಗಳು ಪವಿತ್ರತೆಯನ್ನು ತರುವ ಬದಲಾಗಿ ಪವಿತ್ರತೆಯನ್ನು ಕಳಕೊಳ್ಳುತ್ತವೆ. ಈ ಅನಿಷ್ಟ ಬಾಲವಿವಾಹಗಳಿಂದ ನಿರ್ಜೀವ, ನಿಸ್ತೇಜ ಮತ್ತು ನಿಸ್ಸತ್ವ ಪ್ರಜೆಗಳು ಉತ್ಪನ್ನವಾಗಿ ದೇಶದಲ್ಲಿ ದರಿದ್ರತನವನ್ನು ಹೆಚ್ಚಿಸುವ ಭಿಕ್ಷುಕರು ಮಾತ್ರ ಹೆಚ್ಚಾಗುತ್ತಾರೆ.

(೨೭೦) ತಮ್ಮ ಕಾಮವಾಸನೆಯನ್ನು ಸ್ವಾಧೀನದಲ್ಲಿಟ್ಟುಕೊಳ್ಳಲಿಕ್ಕೆ ಮತ್ತು ಜಗತ್ತಿನಲ್ಲಿ ಅತ್ಯಂತ ಪವಿತ್ರವಾದ ಪತಿಪತ್ನೀ ಸಂಬಂಧವನ್ನು ಪವಿತ್ರವಾಗಿ ಕಾಪಾಡಲಿಕ್ಕೆ ಅಸಮರ್ಥರಿರುವವರು ತಮ್ಮ ಕೈಯಿಂದ ತಾವೇ ತಮ್ಮ ಜೀವಿತವನ್ನು ಮತ್ತು ರಕ್ತವನ್ನು ನಾಶಪಡಿಸುತ್ತಾರೆ.

(೨೭೧) ಪಾವಿತ್ರ್ಯದ ಹೊರತಾಗಿ ಪರಾಕ್ರಮವಿಲ್ಲ; ಪಾವಿತ್ರ್ಯದ ಹೊರತಾಗಿ ಐಕ್ಯವಿಲ್ಲ; ಮತ್ತು ಪಾವಿತ್ರ್ಯದ ಹೊರತಾಗಿ ಅಂತಃಶಾಂತಿಯಿಲ್ಲ ಎಂಬುದನ್ನು ನೀವು ಲಕ್ಷ್ಯದಲ್ಲಿಡರಿ.

(೨೭೨) ಹಿಂದುಸ್ಥಾನದ ವರ್ತಮಾನಪತ್ರಗಳ ಸ್ಥಿತಿಯನ್ನು ಸುಧಾರಿಸುವದು ಬಹುಜನ ಸಮಾಜವನ್ನು ಸುಧಾರಿಸುವ ಅತ್ಯಂತ ಸುಲಭವಾದ ಉಪಾಯವಿರುತ್ತದೆ. ಉಪಯುಕ್ತ ಜ್ಞಾನವನ್ನು ಪ್ರಸಾರ ಮಾಡುವ ಹೊಸ ಹೊಸ ಪತ್ರಿಕೆಗಳನ್ನು ಹೊರಡಿಸಿರಿ. ಹಾಗೂ ಇದ್ದ ಹಳೇ ಪತ್ರಿಕೆಗಳನ್ನು ಸುಧಾರಿಸಿರಿ. ಇವೆಲ್ಲ ದೇಶಭಾಷೆಯಲ್ಲಿಯೇ ಇರತಕ್ಕದ್ದು. ಅಂದರೆ ಇವು ಸ್ತ್ರೀಯರಿಗೂ, ಬಹುಜನ ಸಮಾಜಕ್ಕೂ ಉಪಯೋಗವಾಗುವವು.

(೨೭೩) ನಿಮ್ಮ ಅಂತಃಕರಣದಲ್ಲಿ ಶ್ರದ್ಧೆಯ ಜ್ಯೋತಿಯು ಇಲ್ಲದೆ ಇರುವ ತನಕ ನಿಮ್ಮ ಕೆಲಸಕ್ಕೆ ಎಂದೂ ಯಶಸ್ಸು ಬರಲಾರದು. ಹಾಗೂ ನಿಮ್ಮ ಉಪದೇಶವನ್ನು ಯಾರೂ ಲಕ್ಷಿಸಲಾರರು.

(೨೭೪) ತುರ್ಕಿ ಮೊದಲಾದ ಎರಡನೇ ರಾಷ್ಟ್ರದವರು ಪ್ರಸ್ಥಾಪಿತ ಮಾಡಿದ ರಾಜಕೀಯ ಸಿದ್ಧಾಂತಗಳಿಗಿಂತ ನೀವು ನಿಮ್ಮ ಪರಿಸ್ಥಿತಿಯ ಮೇಲಿಂದ ಮತ್ತು ಅನುಭವದ ಮೇಲಿಂದ ನಿರ್ಣಯಿಸುವ ಸಿದ್ಧಾಂತಗಳು ನಿಮಗೆ ಹೆಚ್ಚು ಉಪಯೋಗ ಬೀಳುವವು.

(೨೭೫) ರಾಜಕೀಯ ಕಾಯದೆಗಳಾಗಲಿ, ಧಾರ್ಮಿಕ ಕಾಯಿದೆಗಳಾಗಲಿ ನಮ್ಮ ಕಲ್ಯಾಣದಗೋಸ್ಕರವಾಗಿಯೇ ಇರುತ್ತವೆ. ನಾವು ಅವುಗಳಿಗೋಸ್ಕ ಇರುವದಿಲ್ಲ; ಅವು ನಮ್ಮಗೋಸ್ಕರ ಇರುತ್ತವೆ.

(೨೭೬) ದೇಶದೊಳಗಿನ ಸಾಧನಸಾಮಗ್ರಿಗಳ ಯೋಗ್ಯ ಉಪಯೋಗ ಮಾಡಿಕೊಳ್ಳುವದೇ ನಿಮ್ಮ ಶಿಕ್ಷಣದ ನಿಜವಾದ ಉದ್ದೇಶವು.

(೨೭೭) ಜನರು ಹೊಸ ವಿಚಾರಗಳಿಗೂ ಹೊಸ ಪದ್ಧತಿಗಳಿಗೂ ಕೆಲವು ಕಾಲದ ವರೆಗೆ ಬಹಳ ಕಸುವಿನಿಂದ ವಿರೋಧ ಮಾಡಿದರು. ಆದರೆ ಆ ವಿರೋಧವು ಈಗ ಮೆಲ್ಲಮೆಲ್ಲನೆ ಹೊರಟು ಹೋಗಲಿಕ್ಕೆ ಹತ್ತಿರುವದರಿಂದ ಪರಿಸ್ಥಿತಿಯು ಬದಲಾಗಿರುತ್ತದೆ. ಆ ಪರಿಸ್ಥಿತಿಯ ಉಪಯೋಗವನ್ನು ನಾವು

ಹೇಗೆ ಮಾಡಿಕೊಳ್ಳಬೇಕೆಂಬ ತಿಳುವಳಿಕೆಯು ನಮ್ಮ ಜನರಲ್ಲಿ ಆಗುತ್ತಿರುವದು ಬಹಳ ಸಮಾಧಾನದ ಸಂಗತಿಯೇ ಸರಿ.

(೨೭೮) ನಾವು ಯಾವ ಪ್ರಕಾರದ ಅನ್ನವನ್ನು ಸೇವಿಸುತ್ತೇವೋ ಆ ಪ್ರಕಾರದ ಆಚಾರ ವಿಚಾರಗಳು ನಮ್ಮಲ್ಲಿ ಹೊರಬೀಳುತ್ತವೆ.

(೨೭೯) ವಿದ್ಯಾರ್ಥಿಗಳಿಗೆ ಜೋಳೇಗೋಧಿಯಂಥ ಉತ್ತಮ ಅನ್ನವು ಯಾವದೂ ಇಲ್ಲ. ಆದರೆ ಆ ಉತ್ತಮ ಅನ್ನಕ್ಕೆ ಜನರು ಕನಿಷ್ಟ ಅನ್ನವೆಂದು ಅನ್ನುವದು ಎಷ್ಟು ಭಯಂಕರ ಅಜ್ಞಾನವು!

(೨೮೦) ನಿಮ್ಮ ದೇಹಾಭಿಮಾನವನ್ನು ಬಿಟ್ಟು ರಾಷ್ಟ್ರಾಭಿಮಾನವನ್ನು ಹಿಡಿಯಿರಿ. ಅಂದರೆ ನಿಮ್ಮ ಭಾವನೆಗಳು ರಾಷ್ಟ್ರದ ಭಾವನೆಗಳಾಗುವವು.

(೨೮೧) ಭಾರತವರ್ಷವನ್ನು ಶೋಭಿಸುವಂಥ ಮತ್ತು ಆನಂದಪಡಿಸುವಂಥ ಪ್ರಚಂಡ ನದಿಗಳು ಹಿಮಾಲಯದಲ್ಲಿ ಉಗಮವಾಗಿರುವಂತೆ ಜಗತ್ತಿನೊಳಗಿನ ಆಧ್ಯಾತ್ಮಿಕ ಜ್ಞಾನದ ಉಗಮವು ಸಹ ಹಿಮಾಲಯದಲ್ಲಿ ಆಗಿದ್ದು ಅಲ್ಲಿಂದ ಆದರ ಪ್ರವಾಹವು ಕೆಳಗೆ ಹರಿಯುತ್ತ ಬಂದಿರುತ್ತದೆ.

(೨೮೦) ಎಲ್ಲ ಪ್ರಕಾರದ ಜ್ಞಾನದ ಉಗಮವು ಆರ್ಯರ ತತ್ವಜ್ಞಾನದಲ್ಲಿರುತ್ತದೆಂದು ಈಗ ಇತಿಹಾಸದ ಮೇಲಿಂದ ಸಿದ್ಧವಾಗಿರುತ್ತದೆ.

(೨೮೧) ಬಲಾತ್ಕಾರದಲ್ಲಿ ಶಕ್ತಿಯಿಲ್ಲ. ಪ್ರೇಮದಲ್ಲಿಯೂ, ಉಲ್ಲಾಸದಲ್ಲಿಯೂ ಶಕ್ತಿಯಿರುತ್ತದೆ.

(೨೮೨) ಹಿಂದುಸ್ಥಾನವು ಭೂಗೋಲದ ದೃಷ್ಟಿಯಿಂದ ಮಾತ್ರವಲ್ಲ, ಬೌದ್ಧಿಕ, ನೈತಿಕ, ಮತ್ತು ಅಧ್ಯಾತ್ಮಿಕ ದೃಷ್ಟಿಯಿಂದ ಸಹ ಒಂದಾನೊಂದು ಕಾಲಕ್ಕೆ ಇಡೀ ಜಗತ್ತಿಗೆ ಶಿರೋಭೂಷಣವಾಗಿತ್ತು. ಅದೇ ಹಿಂದುಸ್ಥಾನವು ಈಗ ಇಡೀಜಗತ್ತಿನ ಕಾಲು ಬೀಳಹತ್ತಿರುತ್ತದೆ. ಅದುದರಿಂದ ನೀವು ಭಾರತ ಮಾತೆಯ ದೈನ್ಯಾವಸ್ಥೆಯನ್ನು ಹೋಗಲಾಡಿಸುವದಕ್ಕೆ ಟೊಂಕಕಟ್ಟಿರಿ.

